

ಕಾಯಕವೇ ಕೈಲಾಸ

# ಸಿದ್ಧಗಂಗಾ



**ಆಯುಧ ಪೂಜೆ ಹಾಗೂ ವಿಜಯದಶಮಿ ಹಬ್ಬದ ಹಾರ್ದಿಕ ಶುಭಾಶಯಗಳು**

ಸಂಪುಟ : ೫೭ ಅಕ್ಟೋಬರ್ ೨೦೨೧ ಸಂಚಿಕೆ : ೧೦



ಆಗಸ್ಟ್ ೩೦ ರಂದು ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ನಡೆದ ೧೧ನೇ ಘಟಿಕೋತ್ಸವದಲ್ಲಿ ಚಿನ್ನದ ಪದಕ ವಿಜೇತರೊಂದಿಗೆ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಎಸ್.ಐ.ಟಿ. ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪ, ನ್ಯಾಕ್ ನಿರ್ದೇಶಕರಾದ ಡಾ. ಎಸ್.ಪಿ. ಶರ್ಮಾ, ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ, ಸಿ.ಇ.ಓ. ಡಾ. ಶಿವಕುಮಾರಯ್ಯ ಹಾಗೂ ಪ್ರಾಂಶುಪಾಲರಾದ ಡಾ. ಎಸ್.ವಿ. ದಿನೇಶ್ ಅವರು ಉಪಸ್ಥಿತರಿದ್ದರು.



ಕೇಂದ್ರ ರಾಜ್ಯ ಸಚಿವೆ ಶೋಭಾ ಕರಂದ್ಲಾಜೆ ಅವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಭಕ್ತಿ ಸಮರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ತುಮಕೂರು ನಗರ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್, ಮಾಜಿ ಶಾಸಕರಾದ ಶ್ರೀ ಸುರೇಶ್‌ಗೌಡ ಮೊದಲಾದವರು ಉಪಸ್ಥಿತರಿದ್ದರು



ಸೆಪ್ಟೆಂಬರ್ ೧೪ ರಂದು ಹೊಸಕೆರೆಹಳ್ಳಿ ಗ್ರಾಮಸ್ಥರು ಹಾಗೂ ಬಸವೇಶ್ವರ ವೀರಶೈವ ಲಿಂಗಾಯಿತ ಸಾಂಸ್ಕೃತಿಕ ಸಂಘದ ಸಹಯೋಗದೊಂದಿಗೆ ಏರ್ಪಡಿಸಿದ್ಧ ಸಮಾರಂಭದಲ್ಲಿ ಲಿಂಗೈಕ್ಯ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪುತ್ಥಳಿಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು.

ಶ್ರೀ ಗುರು ಬಸವಲಿಂಗಾಯ ನಮಃ

ಸಿದ್ಧಗಂಗಾ ಮಠ

ಓಂ ಶ್ರೀ ಶಿವಕುಮಾರ ಗುರವೇ ನಮಃ





## ಕಾರ್ತಿಕ ಮಾಸದ
## ಕೊನೆಯ ಸೋಮವಾರದಂದು

ತುಮಕೂರಿನ ಶ್ರೀ ಸಿದ್ಧಗಂಗಾ ಮಠದಲ್ಲಿ

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ
ದಿವ್ಯ ಸಾನಿಧ್ಯದಲ್ಲಿ

ದಿನಾಂಕ : 29-11-2021ನೇ ಸೋಮವಾರ ಸಮಯ : ಬೆಳಗ್ಗೆ 5:00 ಗಂಟೆಯಿಂದ

ಪದ್ಮಭೂಷಣ, ಕರ್ನಾಟಕ ರತ್ನ, ತ್ರಿವಿಧ ದಾಸೋಹಿ, ನಡೆದಾಡುವ ದೇವರು

## ಡಾ. ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾ ಶಿವಯೋಗಿಗಳವರ ಗದ್ದುಗೆಗೆ

'ದ್ವಿತೀಯ' ವರ್ಷದ ಲಕ್ಷ ಪುಷ್ಪ ಬಿಲ್ವಾರ್ಚನೆ ಪೂಜಾ ಕಾರ್ಯಕ್ರಮ



## ಮಹಾ ಶಿವಯೋಗಿಗಳವರ
## ಗದ್ದುಗೆಗೆ ಹೆಲಿಕ್ಯಾಪ್ಟರ್‌ನಲ್ಲಿ
## ಪುಷ್ಪ ಬಿಲ್ವಾರ್ಚನೆ

ಆಯೋಜನೆ :

ವೀರಶೈವ ಲಿಂಗಾಯತ ಮಹಾ ವೇದಿಕೆ (ನೋ.)

ನಮ್ಮೊಂದಿಗೆ :



































































ಪ್ರಶಾಂತ್ ಕಲ್ಲೂರ್

DS MAX

MATHA GROUP B.S.P. & BROS

SST

ಮಾಣಿಕ್ಯ

ಕಾರ್ಯಕ್ರಮವನ್ನು ಯೂಟ್ಯೂಬ್‌ನಲ್ಲಿ ನೇರ ವೀಕ್ಷಣೆ ಮಾಡಿ https://youtube.com/vlyvedike
ಚಾನಲ್ ಈಗಲೇ ಸಬ್‌ಸ್ಕ್ರೈಬ್ ಮಾಡಿ ಹಾಗೂ ಬೆಲ್ ಬಟನ್ ಒತ್ತಲು ಮರೆಯದಿರಿ.

ಕೇಂದ್ರ ಕಛೇರಿ : #55, 2ನೇ ಅಡ್ಡರಸ್ತೆ, 3ನೇ ಮುಖ್ಯ ರಸ್ತೆ, ಎ.ಇ.ಸಿ.ಎಸ್. 1ನೇ ಹಂತ, ಆರ್.ಎಂ.ವಿ. 2ನೇ ಹಂತ, ಸಂಜಯನಗರ ಮುಖ್ಯ ರಸ್ತೆ, ಅಶ್ವಥನಗರ, ಬೆಂಗಳೂರು - 560 094, Ph : 080 4097 9393

/vlyvedike 92424 4 4444

ವಿ.ಸೂ. : ಕಡ್ಡಾಯವಾಗಿ ಮಾಸ್ಕ್ ಧರಿಸಿ, ಸಾಮಾಜಿಕ ಅಂತರ ಕಾಯ್ದುಕೊಳ್ಳುವುದು.





## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೭ ಅಕ್ಟೋಬರ್ ೨೦೨೧ ಸಂಚಿಕೆ : ೧೦

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಮೊ : ೯೭೪೧೦ ೭೬೮೦೬

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

## ಒಳಪುಟಗಳಲ್ಲಿ ..................



ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಶ್ರೀ ಸಿದ್ಧಗಂಗಾ ಮಠದ ಭಕ್ತರು, ಹಳೆಯ ವಿದ್ಯಾರ್ಥಿಗಳು ಹಾಗೂ ಅಭಿಮಾನಿಗಳ ಮನವಿಗೆ ಸ್ಪಂದಿಸಿದ ಕರ್ನಾಟಕ ಸರ್ಕಾರ ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲಿಂಗೈಕ್ಯರಾದ ಜನವರಿ ೨೧ ರಂದು 'ದಾಸೋಹ ದಿನ'ವನ್ನಾಗಿ ಆಚರಿಸಲು ಸುತ್ತೋಲೆ ಹೊರಡಿಸುವುದರ ಮೂಲಕ ಪರಮಪೂಜ್ಯರಿಗೆ ಭಕ್ತಿಗೌರವ ಸಲ್ಲಿಸಿರುವುದು ಭಕ್ತರಿಗೆ, ಅಭಿಮಾನಿಗಳಿಗೆ ಅತ್ಯಂತ ಸಂತೋಷವನ್ನುಂಟು ಮಾಡಿದೆ. ಇದಕ್ಕೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರಿಗೆ, ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿ ಅವರಿಗೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಹಾಗೂ ಧನ್ಯವಾದಗಳನ್ನು ಸಲ್ಲಿಸುತ್ತದೆ. ಆದರೆ ಈ ಸರ್ಕಾರದ ಆದೇಶ ಸುತ್ತೋಲೆಗೆ ಸೀಮಿತವಾಗದೆ, ಆ ದಿನವನ್ನು ಅರ್ಥಪೂರ್ಣವಾಗಿ ಆಚರಿಸುವಂತಾಗಬೇಕು. ಆಗ 'ದಾಸೋಹದಿನ'ವನ್ನಾಗಿ ಘೋಷಿಸಿದಕ್ಕೆ ಮೌಲ್ಯ ಬರುತ್ತದೆ. ಈ ನಿಟ್ಟಿನಲ್ಲಿ ಎಲ್ಲರೂ ಕಾರ್ಯೋನ್ಮುಖರಾಗಬೇಕಿದೆ.

* * *

ಅಕ್ಟೋಬರ್ ೨, ಮಹಾತ್ಮ ಗಾಂಧೀಜಿ ಹಾಗೂ ಲಾಲ್‌ಬಹದ್ದೂರ್ ಶಾಸ್ತ್ರಿ ಅವರ ಜನ್ಮದಿನ. ಈ ಇಬ್ಬರು ಮಹಾಪುರುಷರು ರಾಷ್ಟ್ರಕ್ಕೆ ನೀಡಿದ ಕೊಡುಗೆ ಸುವರ್ಣಾಕ್ಷರಗಳಲ್ಲಿ ದಾಖಲಿಸುವಂತಹದು.

ಭಾರತದ ಸ್ವಾತಂತ್ರ್ಯ ಇತಿಹಾಸದಲ್ಲಿ ಗಾಂಧೀಜಿ ಒಂದು ಮಹಾನ್ ಧೃವತಾರೆ. ಭಾರತದಲ್ಲಷ್ಟೇ ಅಲ್ಲ, ವಿಶ್ವದ ಜನರ ಹೃದಯ ಮಂದಿರದಲ್ಲಿ ಅವರ ಹೆಸರು ಚಿರಸ್ಥಾಯಿ. ಸತ್ಯ, ಪ್ರಾಮಾಣಿಕತೆ, ನೀತಿ, ಅಹಿಂಸೆ, ಪ್ರೀತಿ, ವಿಶ್ವಾಸ, ರಾಷ್ಟ್ರಭಕ್ತಿ, ದೀನ ದಲಿತರ ಬಗ್ಗೆ ಅನುಕಂಪ, ಕರುಣೆ, ದಯೆ, ಕಳಕಳಿ, ಉದಾರತೆ, ನಿಸ್ವಾರ್ಥತೆ ಇವೆಲ್ಲದರ ಮಹಾಸಂಗವಾಗಿದ್ದವರು ಮಹಾತ್ಮಗಾಂಧೀಜಿಯವರು. 'ಮಹಾತ್ಮ' ಎಂಬ ಪ್ರಶಸ್ತಿ ಸರ್ಕಾರ ಕೊಟ್ಟಿದ್ದಲ್ಲ, ಸಮಸ್ತ ಭಾರತೀಯರು ಪ್ರೀತಿಯಿಂದ ಕೊಟ್ಟಿದ್ದು. ಮಹಾತ್ಮ ಗಾಂಧೀಜಿಯವರು ನುಡಿದಂತೆ ನಡೆದು ತೋರಿಸಿದ ಆದರ್ಶ ವ್ಯಕ್ತಿ. ಆತ್ಮವಿಶ್ವಾಸ, ಆತ್ಮಾಭಿಮಾನ, ಸಾಧಿಸಬೇಕೆಂಬ ಛಲ, ಪರಿಶುದ್ಧ ಜೀವನ, ಇವೆಲ್ಲ ಗುಣಗಳಿಂದ ವಿಶ್ವದ ಇತಿಹಾಸದಲ್ಲಿ ಉನ್ನತ ಸ್ಥಾನವನ್ನು ಪಡೆದುಕೊಂಡಿದ್ದಾರೆ. ಮಾನವೀಯ ಮೌಲ್ಯಗಳ ಪ್ರತಿರೂಪವೇ ಗಾಂಧೀಜಿ. ಅವರು ಅಹಿಂಸೆಯ ಮೂಲಕವೇ ಬ್ರಿಟೀಷರ ಮನಸ್ಸನ್ನು ಪರಿವರ್ತನೆ ಮಾಡಿ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟವರು. ಇಡೀ ವಿಶ್ವದಲ್ಲೇ ಅಹಿಂಸೆಯ ಮೂಲಕ ದೇಶಕ್ಕೆ ಸ್ವಾತಂತ್ರ್ಯ ತಂದು ಕೊಟ್ಟ ಹೆಗ್ಗಳಿಕೆ ಭಾರತಕ್ಕೆ ಸಲ್ಲುತ್ತದೆ. ಗಾಂಧೀಜಿಯವರು ಕಂಡ ಕನಸುಗಳನ್ನು ಸಾಕಾರಗೊಳಿಸುವುದು ಪ್ರತಿಯೊಬ್ಬ ಭಾರತೀಯರ ಆದ್ಯಕರ್ತವ್ಯವಾಗಿದೆ.

ಆದರ್ಶವನ್ನೇ ತಮ್ಮ ಜೀವನದ ಧ್ಯೇಯವನ್ನಾಗಿಸಿಕೊಂಡು ಸರಳತೆ ಮತ್ತು ಪ್ರಾಮಾಣಿಕತೆಯ ಸತ್‌ಪಥದಲ್ಲಿ ನಡೆದು ತೋರಿಸಿದ ಮಹಾಮಾನವತಾವಾದಿ ಲಾಲ್‌ಬಹದ್ದೂರ್ ಶಾಸ್ತ್ರಿ ಅವರು ಈ ಶತಮಾನ ಕಂಡ ಮಹಾನ್ ವ್ಯಕ್ತಿಗಳಲ್ಲಿ ಒಬ್ಬರು. ಭಾರತದ ಪ್ರಧಾನ ಮಂತ್ರಿಗಳಾಗಿ ಅವರು ತೆಗೆದುಕೊಂಡ ನಿರ್ಧಾರಗಳು, ಸಾಧಿಸಿದ ಪ್ರಗತಿ, ಸಲ್ಲಿಸಿದ ಸೇವೆ ಭಾರತೀಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹದು. ಬಡವರು, ದೀನ ದಲಿತರ ಸರ್ವತೋಮುಖ ಅಭಿವೃದ್ಧಿಗೆ ಹಾಗೂ ಭಾರತದ ಸರ್ವಾಂಗೀಣ ಅಭಿವೃದ್ಧಿಗಾಗಿ ಅವರು ಕೊನೆ ಉಸಿರಿರವವರಿಗೂ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದರು. ಕಷ್ಟದ ಸಮಯದಲ್ಲಿ ಅವರು ತೆಗೆದುಕೊಳ್ಳುತ್ತಿದ್ದ ಧೀರೋದ್ಧಾತ ನಿರ್ಧಾರಗಳಿಂದ ವಿಶ್ವವೇ ತನ್ನತ್ತ ನೋಡುಂತೆ ಮಾಡಿದ ಅಪ್ರತಿಮ ದೇಶಪ್ರೇಮಿ. ಅವರೆಂದೂ ಅಧಿಕಾರ, ಪದವಿಗಳನ್ನು ಬೆನ್ನತ್ತಲಿಲ್ಲ. ಅವುಗಳೇ ಲಾಲ್‌ಬಹದ್ದೂರ್ ಶಾಸ್ತ್ರಿ ಅವರನ್ನು ಆಶ್ರಯಿಸಿದವು. ತಾವು ನಂಬಿದ ಮೌಲ್ಯಗಳೊಂದಿಗೆ ಎಂದೂ ರಾಜಿ ಮಾಡಿಕೊಂಡವರಲ್ಲ. ನಿಸ್ವಾರ್ಥ ಸೇವೆ, ಸಾಮಾಜಿಕ ಕಳಕಳಿ, ಅನುಕಂಪ, ಸಹೃದಯತೆ ಅವರ ಒಡನಾಡಿಗಳಾಗಿದ್ದವು. ಕೊನೆಯವರೆಗೂ ಅವು ಯಾವುವೂ ಬಿಟ್ಟು ಹೋಗಲಿಲ್ಲ.

* * *

ಹಬ್ಬಗಳು ಭಕ್ತಿ, ಕರ್ಮಗಳ ತ್ರಿವೇಣಿ ಸಂಗಮ. ಹಬ್ಬದ ದಿನ ದೇವರನ್ನು ವಿಶೇಷ ಭಕ್ತಿಯಿಂದ ಆರಾಧಿಸುತ್ತೇವೆ. ಆ ಆರಾಧನೆಯ ಹಿಂದೆ ಸ್ವಂತ ಹಿತಾಶಕ್ತಿಗೆ ಅವಕಾಶವಿರಬಾರದು. ದೇವರನ್ನು ಪೂಜಿಸಿ ಬೇಡುವುದು, ಕಾಡುವುದು ಭಕ್ತಿಯಲ್ಲ. ನಿಷ್ಕಾಲ ಹೃದಯದಿಂದ ದೇವರನ್ನು ಪ್ರಾರ್ಥಿಸುವುದೇ ನಿಜವಾದ ಭಕ್ತಿ. ಬಹಿರಂಗ ಶುದ್ಧಿಯ ಜೊತೆಗೆ ಅಂತರಂಗದ ಶುದ್ಧಿಯನ್ನು ಕಾಪಾಡಿಕೊಂಡು ದೇವರನ್ನು ಪೂಜಿಸಬೇಕು. ಹಬ್ಬಗಳು ನಮ್ಮ ಆಧ್ಯಾತ್ಮಿಕ ಶ್ರದ್ಧೆಯನ್ನು ವೃದ್ಧಿಸುವ ಸಾಧನಾ ಶುದ್ಧ ಜೀವನವನ್ನು ನಡೆಸಲು ಇವು ಮಾರ್ಗದರ್ಶನ ನೀಡುತ್ತವೆ. ನಿತ್ಯ ಜೀವನದ ಗಡಿಬಿಡಿಯಲ್ಲಿ, ಮಾನಸಿಕ ಗೊಂದಲದಲ್ಲಿ ಸ್ವಲ್ಪ ಸಮಯವನ್ನಾದರೂ ಸಂಯಮದಿಂದ ದೇವರ ಸಾನ್ನಿಧ್ಯದಲ್ಲಿ ಮನಸ್ಸನ್ನು ಏಕಾಗ್ರತೆಗೊಳಿಸಲು ಸಹಾಯವಾಗುತ್ತದೆ.

ಸಿದ್ಧಗಂಗಾ ಪತ್ರಿಕೆಯ ಚಂದಾದಾರರಿಗೆ, ಓದುಗರಿಗೆ ಹಾಗೂ ಜಾಹಿರಾತುದಾರರಿಗೆ ಗಾಂಧೀಜಿ-ಲಾಲ್‌ಬಹದ್ದೂರ್ ಶಾಸ್ತ್ರಿ ಜಯಂತಿ ಹಾಗೂ ಆಯುಧಪೂಜೆ-ವಿಜಯದಶಮಿ ಹಬ್ಬದ ಹಾರ್ದಿಕ ಶುಭಾಶಯಗಳು.

**ಪ್ರೊ. ಹೆಚ್.ವಿ. ವೀರಭದ್ರಯ್ಯ**





# ಶ್ರೀವಾಣಿ



ಭಾರತದ ಋಷಿ ಮುನಿಗಳು, ಸಾಕ್ಷಾತ್ಕಾರಿಗಳು. ಈ ಪರಮ ಸತ್ಯವನ್ನು ಸಹಸ್ರಾರು ವರ್ಷಗಳ ಹಿಂದೆಯೇ ಅರಿತು ಸಾರಿದರೆನ್ನುವ ವಿಷಯ ಭಾರತೀಯರಿಗೆ ಅಭಿಮಾನದ ಸಂಗತಿ. ಅವರ ಅನ್ವೇಷಣೆಯು ಬೇರೆ ಮಾರ್ಗದಲ್ಲಿತ್ತು. ಸಾಧನೆಯು ಬೇರೆ ವಿಧವಾಗಿತ್ತು. ಅವರ ಸಂಶೋಧನೆಯ ವಸ್ತು ಪಿಂಡಾಂಡ (Human body). ಅವರ ದೃಷ್ಟಿ ಅಂತರ್ದೃಷ್ಟಿ. ಯೋಗನಿಷ್ಠರಾಗಿ ಮಾನವನಲ್ಲಿ ಅಡಗಿರುವ ಅದ್ಭುತವಾದ ಅಂತರಂಗ ಶಕ್ತಿಗಳ ಅರಿವು ಮಾಡಿಕೊಂಡು ಪ್ರಖರ ಸಾಧನೆಯಿಂದ ಅವುಗಳ ಮೇಲೆ ಪ್ರಭುತ್ವವನ್ನು ಹೊಂದಿ ಅನಂತ ಶಕ್ತಿಗಳ ಚಾಲಕವೂ, ಪ್ರೇರಕವೂ ಆದ ಮಹಾಶಕ್ತಿಯೊಂದನ್ನು ಕಂಡುಕೊಂಡು ಅದರ ಪ್ರಭೆಯಲ್ಲಿ ಅಖಂಡಮೂರ್ತಿಗಳಾಗಿ ಬೆಳಗಿ ಸತ್ಯ ಸಾಕ್ಷಾತ್ಕಾರವನ್ನು ಪಡೆದು ತಮ್ಮ ಸಿದ್ಧಿಯ ತೇಜಸ್ಸನ್ನು ಜಗತ್ತಿಗೆ ನೀಡಿದರು. ಸಾಕ್ಷಾತ್ಕಾರದ ಸಂದೇಶವನ್ನು ಸಾರಿದರು. ಅವ್ಯಕ್ತವಾಗಿರುವ ಮಹಾಶಕ್ತಿಯ ಒಂದು ಅಂಶದ ವ್ಯಕ್ತಿಸ್ವರೂಪವೇ ಈ ಜಗತ್ತು ಎನ್ನುವುದು ಅವರ ಸಂದೇಶ.

ವಿಜ್ಞಾನಿಯು ಸೃಷ್ಟಿಯನ್ನು ತನ್ನ ಸಾಧನೆಯ ವಸ್ತುವನ್ನಾಗಿ ಅಂಗೀಕರಿಸಿ ಸೃಷ್ಟಿಯ ಗರ್ಭದಲ್ಲಿ ಹುದುಗಿರುವ ಅಗಾಧವಾದ ಶಕ್ತಿಗಳನ್ನೂ ಅವುಗಳ ಪ್ರಯೋಜನಗಳನ್ನೂ ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿ ಆ ಮಾರ್ಗದಲ್ಲಿ ಮುಂದುವರಿದು ಸತ್ಯವನ್ನು ಕಂಡುಕೊಳ್ಳಲು ಹವಣಿಸಿದ್ದಾನೆ. ಅವನ ಸಾಧನೆಗೆ ಅನೇಕ ಪ್ರಯೋಗಶಾಲೆಗಳೂ, ಯಂತ್ರ ರಚನೆಗಳೂ, ಅಗಾಧವಾದ ಭೌತಿಕಸಂಪತ್ತನ್ನು ವ್ಯಯ ಮಾಡಿವೆ. ಅವನದು ಹೊರಗಿನ ದೃಷ್ಟಿ. ಅವನ ಸಾಧನೆಯು ಬಾಹ್ಯಮುಖವಾಗಿದೆ. ನೂರಾರು ವರ್ಷಗಳ ಪರಿಶ್ರಮದ ಫಲವಾಗಿ ಇಂದು ಸತ್ಯದ ಮುಂಬೆಳಗು ಕಾಣುತ್ತಲಿದ್ದಾನೆ. ಸಹಸ್ರಾರು ವರ್ಷಗಳ ಹಿಂದೆಯೇ ಸತ್ಯ ಸಾಕ್ಷಾತ್ಕಾರ ಮಾಡಿಕೊಂಡ ಯೋಗಿಯು ಪಿಂಡಾಂಡದಲ್ಲಿನ ಅನಂತ ಶಕ್ತಿಗಳನ್ನು ಅರಿತು ಅದನ್ನೇ ಸಾಧನೆಯ ವಸ್ತುವಾಗಿ ಸ್ವೀಕರಿಸಿ ಸಾಧನಾಪರನಾದನು. ಅವನ ಸಾಧನೆಯು ಅಂತರ್ಮುಖವಾಗಿದೆ. ಪ್ರಯೋಗಶಾಲೆಗಳಿಲ್ಲ. ಯಂತ್ರ ರಚನೆಗಳಿಲ್ಲ. ಭೌತಿಕ ಸಂಪತ್ತಿನ ವ್ಯಯಮಾಡದೆ ಸಂಯಮ ಸಾಧನೆಗಳಿಂದಲೇ ದರ್ಶನವನ್ನು ಪಡೆದಿದ್ದಾನೆ. ತನ್ನ ಅಮರ ಸಂದೇಶವನ್ನು ಜಗತ್ತಿಗೆ ಕೊಟ್ಟು ಹೋಗಿದ್ದಾನೆ. ಇಂದಿನ ಭಾರತೀಯರು ತಮ್ಮ ಹಿರಿಯರ ಈ ಮಹಾಸಾಧನೆಯನ್ನು ಅರಿವಿನಿಂದ ಜಾಗೃತರಾಗಿ ತಮ್ಮ ಪ್ರಾಚೀನ ಸಂಸ್ಕೃತಿಯ ಬಗ್ಗೆ, ಹಿರಿಯ ಬಗ್ಗೆ ಗೌರವವನ್ನು ಹೊಂದಿ ಅಂತಹ ಪವಿತ್ರವಾದ ಸಂಸ್ಕೃತಿಯ ಭಾರತದ ನವಜನ್ಮದ ಅಂಕುರ ಎಂದೀತು.

**(೧೪-೦೧-೬೫ ರಂದು ಹೊರತಂದ 'ಸಿದ್ಧಗಂಗಾ' ತ್ರೈಮಾಸಿಕದ ಮೊದಲನೆಯ ಸಂಚಿಕೆಗಾಗಿ ಶ್ರೀ ಶ್ರೀಗಳು ನೀಡಿದ ದಿವ್ಯಸಂದೇಶ)**

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಆದಿಯಲ್ಲಿ ನಾ ಹುಟ್ಟುವಂದು
ಎನ್ನೊಡಹುಟ್ಟಿದವರು ಐವರು ನೋಡಾ.
ಒಡಹುಟ್ಟಿದರೈವರು ಎನಗೆ ಒಡಲಾಗಿಪ್ಪರು ನೋಡಾ.
ಒಡಲನುರಿಗಿತ್ತು ಎನ್ನ ನಿಮಗಿತ್ತು ನಿರ್ವಯಲಾದೆನು ಕಾಣಾ,
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಹಲವು ಆದಿಯಲ್ಲಿ ನಾ ಹುಟ್ಟುವಂದು; ಆದಿಯಲ್ಲಿ-ಸದಾಶಿವನ ಗೋಪ್ಯಮುಖದಲ್ಲಿ, ನಾ ಹುಟ್ಟುವಂದು-ಆತ್ಮನು ಉತ್ಪತ್ಯವಾಗುವಂದು, ಎನ್ನ ಒಡಹುಟ್ಟಿದವರು ಎನ್ನೊಡನೆ ಉತ್ಪತ್ಯವಾದಂಥವರು, ಐವರು-ಪಂಚ ಭೂತಂಗಳು, ನೋಡಾ-ಕಂಡಾ; ಒಡಹುಟ್ಟಿದರೈವರು-ಪಂಚ ಭೂತಂಗಳು, ಎನಗೆ-ಆತ್ಮನಿಗೆ, ಒಡಲಾಗಿಪ್ಪರು-ದೇಹವಾಗಿಪ್ಪರು, ನೋಡಾ-ಕಂಡಾ; ಒಡಲಂ-ಅಂಗವನ್ನು, ಉರಿಗಿತ್ತು-ಚಿದಾಗ್ನಿ ಸ್ವರೂಪವಾದ ಇಷ್ಟಲಿಂಗಕ್ಕೆ ಕೊಟ್ಟು, ಎನ್ನ ನಿಮಗಿತ್ತು ನಿರ್ವಯಲಾದೆನು: ಎನ್ನ-ನನ್ನ, ನಿಮಗೆ-ಲಿಂಗಕ್ಕೆ, ಇತ್ತು-ಕೊಟ್ಟು, ನಿರ್ವಯಲಾದೆನು-ನಿರಾಕಾರವಾದ ಬ್ರಹ್ಮದಲ್ಲಿ ನಿಷ್ಪತ್ತಿಯಾದೆನು. ಕಾಣಾ-ಕಂಡಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

**(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)**

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಲ್ಯಾಣ ಪಟ್ಟಣ ಶರಣರ ಸುಕ್ಷೇತ್ರ
ಬಲ್ಲ ಭಕುತರ ಕೈಲಾಸ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವೇಶ ನಡೆಸಿದ ನಿತ್ಯ ದಾಸೋಹವ
ಅಸಮಾಕ್ಷ ಬಂಟ ಬಸವೇಶ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಡತನ ಬಂದರೆ ಬಾಚಿ ತಬ್ಬುವೆ ಗುರುವೆ
ಒಡೆಯ ನೀನಿರಲು ಭಯವಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವ್ಯರ್ಥ ಮಾಡಲಿ ಬೇಡ ನಿತ್ಯದ ಸಮಯದ
ಕರ್ತವ್ಯ ಮರೆತು ನಡೆಬೇಡ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾನವ ಜನ್ಮವು ಶ್ರೇಷ್ಠ ರತ್ನವೆಂದೆ
ಜತನವಾಗಿರಿಸು ಜಗದೊಳಗೆ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೇಗಿಲ ಹಿಡಿದರೆ ತೂಗಿ ಬರುವುದು ಬೆಳೆಯು
ಬಾಗಿ ಬಾಳಿದರೆ ಸಿಹಿಯಹುದು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರ್ಪಣ ಅನುಭಾವ ಅರ್ಚನಾದಿಗಳೆಲ್ಲ
ಅಂಗಗುಣವಳಿವುದಕೆ ಸಹಕಾರಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗಗುಣಗಳಳಿದು ಲಿಂಗಗುಣಗಳು ಬೆಳೆದು
ಅಂಗಲಿಂಗಳೆರಡು ಬಡಬೆರೆದು । ಬಾಳೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಡಂಬರ ಅದ್ದೂರಿ ವೈಭವಗಳು ಸಲ್ಲದು
ಸರಳ ಜೀವನ ಸಾಕು ಸಾಧನೆಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣರ ಪಥದಲ್ಲಿ ಕರುಣೆಯ ಹರಿದಿದೆ
ಹಿರಿದಾರಿ ತೆರೆದಿದೆ ಎಲ್ಲರಿಗೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



## ಸುತ್ತೋಲೆ

**ಕರ್ನಾಟಕ ಸರ್ಕಾರ**

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನಸೌಧ,
ಬೆಂಗಳೂರು, ದಿನಾಂಕ: 02.09.2021

ಸಂಖ್ಯೆ: ಸಿಆಸುಇ 48 ರಾಸಾ 2021

**ಸುತ್ತೋಲೆ**

**ವಿಷಯ : ತ್ರಿವಿಧ ದಾಸೋಹಿ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಲಿಂಗೈಕ್ಯರಾದ ದಿನ, ಜನವರಿ 21 ಅನ್ನು "ದಾಸೋಹ ದಿನ"ವೆಂದು ಆಚರಿಸುವ ಬಗ್ಗೆ.**

ಪರಮಪೂಜ್ಯ ಶ್ರೀ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳು "ಕಾಯಕವೇ ಕೈಲಾಸ" ಎಂಬ ತತ್ತ್ವದಡಿ 1930 ರಲ್ಲಿ ಸಿದ್ಧಗಂಗಾ ಮಠದ ಜವಾಬ್ದಾರಿಯನ್ನು ಹೊತ್ತು ಅಂದಿನಿಂದಲೂ ನಿರಂತರವಾಗಿ ಮಠಕ್ಕೆ ಬರುವ ಲಕ್ಷಾಂತರ ಬಡ ಮಕ್ಕಳಿಗೆ ಜಾತಿ-ಧರ್ಮ ಭೇದವಿಲ್ಲದೇ ವಿದ್ಯೆ, ವಸತಿ, ದಾಸೋಹ ನೀಡಿ "ತ್ರಿವಿಧ ದಾಸೋಹಿ"ಗಳಾಗಿದ್ದರು. 1960ರ ದಶಕದಲ್ಲಿ ಭಾರತ ದೇಶವೇ ಆಹಾರದ ಕೊರತೆಯನ್ನು ಎದುರಿಸುತ್ತಿರುವಾಗ ಶ್ರೀಗಳು ಸ್ವತಃ ತಾವೇ ಜೋಳಿಗೆ ಹಿಡಿದು ಜನರಿಂದ ದಾನ ಪಡೆದು ಹಸಿವು ನೀಗಿಸಿದವರು. ಶ್ರೀಗಳ ಪರಂಪರೆಯಂತೆ ಇಂದಿಗೂ ಸಾವಿರಾರು ಬಡ ಮಕ್ಕಳಿಗೆ ಹಾಗೂ ಭಕ್ತರಿಗೆ ನಿತ್ಯ ದಾಸೋಹ ಮಾಡಲಾಗುತ್ತಿದೆ. ಶ್ರೀಗಳು ಒಂಬತ್ತು ದಶಕಗಳಿಗೂ ಮೀರಿ ನಿತ್ಯ ದಾಸೋಹಗೈದು ನಾಡಿನ ಇತರೆ ಎಲ್ಲರಿಗೂ ಮಾದರಿಯಾಗಿದ್ದು ದಾಸೋಹ ಶ್ರೇಷ್ಠರಾಗಿದ್ದವರು. ಶ್ರೀಗಳ ಈ ಕೈಂಕರ್ಯ ಪರಿಗಣನೆಯಲ್ಲಿ 2007 ರಲ್ಲಿ ಕರ್ನಾಟಕ ಸರ್ಕಾರವು "ಕರ್ನಾಟಕ ರತ್ನ" ಪ್ರಶಸ್ತಿ ನೀಡಿ ಗೌರವಿಸಿರುತ್ತದೆ.

ಶ್ರೀಗಳು ಸಮಾಜ ಸೇವಾ ಕಾರ್ಯ ಕ್ಷೇತ್ರಗಳಾದ ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ತಮ್ಮನ್ನೆ ತಾವು ತೊಡಗಿಸಿಕೊಂಡು ಲಿಂಗೈಕ್ಯರಾಗಿದ್ದು, ಇವರು ನಿತ್ಯಪೂಜ್ಯರು ಹಾಗೂ ಕಾಲಕಾಲಕ್ಕೂ ಅನುಸರಣೀಯರಾಗಿದ್ದು, ಇವರ ಅಭೂತಪೂರ್ವ ಸೇವೆಯನ್ನು ಸ್ಮರಿಸುವ ಸಲುವಾಗಿ, ಶ್ರೀಗಳು ಲಿಂಗೈಕ್ಯರಾದ ದಿನವನ್ನು ಅಂದರೆ ಜನವರಿ 21 ರಂದು ಸರ್ಕಾರದ ವತಿಯಿಂದ "ದಾಸೋಹ ದಿನ"ವೆಂದು ಆಚರಿಸುವಂತೆ ಈ ಮೂಲಕ ತಿಳಿಸಲಾಗಿದೆ.

ಈ ಬಗ್ಗೆ ಪೂಜ್ಯ ಶ್ರೀ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಯವರ ಭಾವಚಿತ್ರದ ಪ್ರತಿಗಳನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ಪಡೆದುಕೊಂಡು, ಸದರಿ ದಿನದಂದು "ದಾಸೋಹ ದಿನ"ವನ್ನು ಅರ್ಥಪೂರ್ಣವಾಗಿ ಆಚರಿಸಲು ಸಂಬಂಧಪಟ್ಟ ಇಲಾಖೆಗಳು ಈ ಬಗ್ಗೆ ರೂಪುರೇಷೆಗಳನ್ನು ತಯಾರಿಸಿ ಕಾರ್ಯಕ್ರಮವನ್ನು ಜಾರಿಗೊಳಿಸಲು ಅಗತ್ಯ ಕ್ರಮವಹಿಸುವಂತೆ ಸೂಚಿಸಲಾಗಿದೆ.

2/9/21

(ಎಂ.ಎಂ. ರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜಕೀಯ)

2/9/2021







ಸುಪ್ರಭಾತ

# ಶ್ರೀ ಶಿವಕುಮಾರೇಶ್ವರ ಸುಪ್ರಭಾತಂ

– ಕೋ.ರಂ. ಬಸವರಾಜು *

ಶಿವಗಿರಿಯ ಬಳಸಿರುವ ವೃಕ್ಷರಾಜಿಯ ನಡುವೆ
ಕಾಜಾಣಕೋಗಿಲೆಯ ಸಂಗೀತಘೋಷದಲಿ
ನಿಶೆಕರಗಿ ಮೂಡಣದಿ ಉಷೆ ಎದ್ದು ಬರುತಿಹಳು
ಶಿವಯೋಗ ನಿದ್ರೆಯಿಂ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೧॥

ಶ್ರೀಮಠದ ಸನಿಹದಾ ಚಾರುಹೂಬನದಿ
ಲತೆರಮಣಿಯರು ನಿನ್ನ ಶಿವಪೂಜೆಗೆಂದು
ಭಕ್ತಿಯಿಂ ಹೂಗಳ ಪಿಡಿದು ನಿಂತಿಹರು
ಶಿವಯೋಗ ನಿದ್ರೆಯಿಂ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೨॥

ಮೂಡಣದಿ ರವಿಯು ಮೂಡುತ್ತಲಿಹನು
ಮಠದ ಮುದ್ದುಮಕ್ಕಳೆಲ್ಲರು ನೆರೆದು
ತವೆ ನಿನ್ನ ಚರಣವನು ಭಜಿಸುತಿಹರು
ಶಿವಯೋಗ ಶ್ರೀಗಿರಿಯೆ ದರುಶನವ ನೀಡಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೩॥

ನಿತ್ಯನೇಮದಿ ನಿನ್ನ ಚಿದ್ರೂಪವನು ಧ್ಯಾನಿಸುವ
ತವ ಶಿಷ್ಯರಾ ಹೃದ್ದೀಪವನು ಪ್ರಜ್ವಲಿಸಿ
ನೆನವ ಮನಕೆ ಚಿದ್ಬೆಳಕ ತೋರಯ್ಯಾ
ಸಿದ್ಧಗಂಗೆಯ ಬೆಳಕೆ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೪॥

ನೀಗೈದ ಲಿಂಗಪೂಜಾನಂದದೊಳು ಮಿಂದು
ಚರಣೋದಕವ ಬಯಸಿ ಭಕ್ತಗಣ ಬಂದಿಹುದು
ತನುಮನದ ಮೈಲಿಗೆಯ ಕೊಳೆಕಳೆಯಲೆಂದು
ಶೀಲವಂತರ ನಿಧಿಯೆ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೫॥

ಅಂಗವಾ ಮರೆಗೊಂಡ ಲಿಂಗದಾರೂಪಿಂದೆ
ಮೂರ್ತಗೊಂಡಿಹ ನಿನ್ನ ದರುಶನಕೆ ಎಂದು
ನೊಂದುಬೆಂದವರು ನಿನ್ನ ಸನ್ನಿಧಿಗೆ ಬಂದಿಹರು
ದೀನದಲಿತರ ಸುರತರುವೆ ಏಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೬॥

ಶಿವಯೋಗ ತತ್ತ್ವವನು ಮೌನದಿಂ ಬೋಧಿಸುತೆ
ಶಿಷ್ಯರಿಗೆ ಸೊಗವಿಡಿದಾಚರಿಪಮಾರ್ಗವನು
ನಿರುತದಿಂ ತೋರುವ ನಿತ್ಯನಿರಂಜನ ಗುರುವೆ
ಶಿವಯೋಗ ನಿದ್ರೆಯಿಂ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೭॥

ಉದ್ದಾನಗುರುವರರ ಸದ್ಭಾವದಲ್ಲಡಗಿಹ
ನಿನ್ನರೂಪನನುದಿನವು ಹರನರರು ಧ್ಯಾನಿಪರು
ಪಶುಪಕ್ಷಿಸಂಕುಲವು ಪರುಷಸುಖಕೆ ಕಾದಿಹವು
ಕರುಣಸಾಗರನೆ ನೀ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೮॥

ದುಷ್ಟವೃಷಭನಾ ಋಕ್ಷತನವನು ಸ್ಪರ್ಶಮಾತ್ರದಿ ಕಳೆದ
ಮೈಮರೆತ ಮಾಯೆಯ ಮದನಮದ್ದಳೆಯ ಹೊಡೆದೆಸೆದ
ಅಳಿಮನದವನ ದುರುಳಬುದ್ಧಿಯ ದೃಷ್ಟಿಮಾತ್ರದಿ ತೊಳೆದ
ತವಲಿಂಗಸಿದ್ಧಿಯಾ ಲೀಲೆಗಳ ತೋರಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೯॥

ಧರೆಯೊಳಗೆ ದಾಸೋಹ ಮಠವೆಂಬ ಕೀರ್ತಿಯನು
ಉಂಡುತೇಗಿದ ಲೋಕ ಕೊಂಡಾಡಿಕುಣಿವಂತೆ
ತವಶಿಷ್ಯರಿಗೆ ದಾಸೋಹಮಂತ್ರವನು ಬೋಧಿಸುತೆ
ನೀ ಗೈದ ದಾಸೋಹ ಸಿರಿಯ ನೋಡಲೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೧೦॥

ಗದ್ದಿಗೆಯ ಪೀಠದಲಿ ಹೊಳೆವ ಯೋಗಿಹಂಸನೆ
ಚರವರಲೋಕಪೂಜಿತ ಮಹಾಜಂಗಮನೆ
ಲಿಂಗವ ಪೂಜಿಸಿ ಮಹಲಿಂಗವಾದ ಶಿವನೆ
ಲೋಕವನು ಹರಸಲು ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೧೧॥

ಭವರೋಗ ವೈದ್ಯನೆಂದು ನೆರೆಲೋಕನಂಬಿಹುದು
ಕಾಣಬಾರದ ವಸ್ತುವ ಭೇದಿಸಿದ ಸದ್ಗುರುವೆ
ಅದೃಶ್ಯಮಾರಿಗೆ ಬಲಿಯಾಗುವರ ಕಾಯಯ್ಯಾ
ಗುರುಬಸವನೊಲಿದಷ್ಟಲಿಂಗವೆ ತವಕದಿಂದೇಳಯ್ಯಾ
ಸುಪ್ರಭಾತವು ನಿನಗೆ ಶ್ರೀ ಶಿವಕುಮಾರೇಶಾ ॥೧೨॥

* ಶಿವಗಿರಿ=ಹಿಂದೆ ಸಿದ್ಧಗಂಗಾಬೆಟ್ಟಕ್ಕೆ ಇದ್ದ ಹೆಸರು
ಅದೃಶ್ಯಮಾರಿ=ಕೊರೊನಾ ಮಾರಿ

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.







ವರದಿ

# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ೧೧ನೇ ಘಟಿಕೋತ್ಸವ

ರಾಜ್ಯದ ಪ್ರತಿಷ್ಠಿತ ತಾಂತ್ರಿಕ ಕಾಲೇಜು ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಹನ್ನೊಂದನೇ ಘಟಿಕೋತ್ಸವ ಆಗಸ್ಟ್ ೩೦ ರಂದು ಕಾಲೇಜಿನ ಆವರಣದಲ್ಲಿರುವ ಬಿರ್ಲಾ ಸಭಾ ಭವನದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು.

ಪೂಜ್ಯ ಶ್ರೀಗಳವರ ತಮ್ಮ ಮಂಗಳ ನುಡಿಗಳಲ್ಲಿ "ಪ್ರಸ್ತುತ ಸಂದರ್ಭದಲ್ಲಿ ಕೋವಿಡ್ ಎಲ್ಲಾ ಕ್ಷೇತ್ರಗಳ ಮೇಲೆ ಪರಿಣಾಮ ಬೀರಿದ್ದು, ಇದಕ್ಕೆ ಶಿಕ್ಷಣ ರಂಗವೂ ಹೊರತಾಗಿಲ್ಲ. ಆನ್‌ಲೈನ್ ಶಿಕ್ಷಣ ಸೇರಿದಂತೆ ಹೊಸ ಕಲಿಕೆ ಮಾರ್ಗದತ್ತ ಚಿಂತಿಸುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಪದವಿಶಿಕ್ಷಣ ಪಡೆಯುವ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಿದ್ದು ಉದ್ಯಮ ಸೇರಿದಂತೆ ಎಲ್ಲಾ ರಂಗಗಳಲ್ಲಿಯೂ ಮಹಿಳೆಯರು ಮುಂದೆ ಬರಬೇಕು, ಬಸವಾದಿ ಶರಣರು, ದೇಶದ ಮೊದಲ ಮಹಿಳಾ ಶಿಕ್ಷಕಿ ಸಾವಿತ್ರಿಬಾಯಿ ಫುಲೆ ಅವರು ಮಹಿಳಾ ಸಬಲೀಕರಣವನ್ನು ಹೆಚ್ಚು ಪ್ರತಿಪಾದಿಸಿದರು. ಇಡೀ ದೇಶದಲ್ಲಿ ತಾಂತ್ರಿಕ ಕ್ಷೇತ್ರದಲ್ಲಿ ಮಹಿಳೆಯರ ಪ್ರಮಾಣ ಶೇ. ೨೦ ರಷ್ಟು ಮಾತ್ರ ಇದೆ. ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಶೇ. ೩೯ ರಷ್ಟು ಯುವತಿಯರು ಸೇರ್ಪಡೆಯಾಗಿರುವುದು ಸ್ವಾಗತಾರ್ಹ ಎಂದು ಹೇಳಿದರು. ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜಿನಲ್ಲಿ ಶಿಕ್ಷಣ ಪಡೆದಿರುವ ವಿದ್ಯಾರ್ಥಿಗಳು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಉನ್ನತ ಸ್ಥಾನದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಂತಹ ಸಾಧಕರ ಸ್ಫೂರ್ತಿಯನ್ನು ಹೊಂದಿ ಸಮಾಜಕ್ಕೆ ಮರಳಿ ನೀಡುವ ಪರಂಪರೆ ರೂಢಿಸಿಕೊಳ್ಳಬೇಕು, ಭಾರತ ಹಾಗೂ ಜಗತ್ತು ಸಮಾಜಕ್ಕೆ ಒಳ್ಳೆಯ ಕೊಡುಗೆಗಳನ್ನು ನಿರೀಕ್ಷಿಸುತ್ತಿದ್ದು ೩೫ ವರ್ಷದೊಳಗಿರುವ ಭಾರತದ ಶೇ. ೬೫ ರಷ್ಟು ಮಂದಿ ದೇಶಕ್ಕಾಗಿ ದುಡಿಯುವಂತವರಾಗಿದ್ದಾರೆ. ರಾಷ್ಟ್ರ ನಿರ್ಮಾಣದಲ್ಲಿ ಯುವಜನರ ಪಾತ್ರ ಹೆಚ್ಚಿದ್ದು ಇದು ಸಾಕಾರಗೊಳ್ಳಬೇಕಾದರೆ ಭೌತಿಕವಾಗಿಯೂ ಸದೃಢರಾಗಬೇಕಿದೆ. ಈ ನಿಟ್ಟಿನಲ್ಲಿ ಪ್ರಧಾನಮಂತ್ರಿಗಳು ಜಾರಿಗೊಳಿಸಿರುವ ಫಿಟ್‌ಇಂಡಿಯಾ ಆಂದೋಲನದಲ್ಲಿ ನಾವೆಲ್ಲ ಭಾಗಿಯಾಗಿ ನಿತ್ಯ ವ್ಯಾಯಾಮ, ಯೋಗಾಭ್ಯಾಸ ತಪ್ಪದೆ ಮಾಡಬೇಕಿದೆ. ಆರೋಗ್ಯವೇ ಸಂಪತ್ತೆಂಬ ಮಹಾತ್ಮಗಾಂಧೀಜಿಯವರ ಮಾತನ್ನು ಪ್ರತಿಯೊಬ್ಬರೂ ಜೀವನದಲ್ಲಿ ಅಳವಡಿಸಿಕೊಂಡು ಸಾಕಾರಗೊಳಿಸಬೇಕಿದೆ.











ಕೋವಿಡ್ ಕಾಲಘಟ್ಟದಲ್ಲಿ ಇಡೀ ಜಗತ್ತೇ ಆರ್ಥಿಕ ಸಂಕಷ್ಟದಲ್ಲಿ ಸಿಲುಕಿರುವ ಸಂದರ್ಭದಲ್ಲಿಯೂ ಸಿದ್ಧಗಂಗಾ ತಾಂತ್ರಿಕ ಕಾಲೇಜಿನ ವಿದ್ಯಾರ್ಥಿಗಳು ಕ್ಯಾಂಪಸ್ ಆಯ್ಕೆಯಲ್ಲಿ ಉನ್ನತ ಹುದ್ದೆಗಳಿಗೆ ನೇಮಕಗೊಂಡಿರುವುದು ಕಾಲೇಜಿನ ಗುಣಮಟ್ಟದ ಬೋಧನೆಗೆ ಸಾಕ್ಷಿಯೆನಿಸಿದೆ. ೨೦೧೯–೨೦ನೇ ಸಾಲಿನಲ್ಲಿ ೧೪೦ ಕಂಪನಿಗಳಲ್ಲಿ ೮೦೫ ಮಂದಿ ಉದ್ಯೋಗ ಪಡೆದಿದ್ದು ಕಾಲೇಜಿನ ಆಡಳಿತ ಮಂಡಳಿ, ಅಧ್ಯಾಪಕ ವೃಂದದವರ ಪರಿಶ್ರಮ, ಬದ್ಧತೆಯಿಂದ ವಿದ್ಯಾರ್ಥಿಗಳ ಪ್ರಯತ್ನ ಗಣನೀಯವಾಗಿದೆ" ಎಂದು ನುಡಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿ, ಪದವಿ ಪ್ರದಾನ ಮಾಡಿದ ತುಮಕೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಹಾಗೂ ನ್ಯಾಕ್ ನಿರ್ದೇಶಕರಾದ ಡಾ. ಎಸ್.ಸಿ. ಶರ್ಮಾ ಅವರು ಮಾತನಾಡಿ "ನೂತನ ರಾಷ್ಟ್ರೀಯ ಶಿಕ್ಷಣ ನೀತಿಗೆ ಪೂರಕವಾಗಿರುವ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಹಿಂದಿನಿಂದಲೂ ಇರುವುದಕ್ಕೆ ಲಿಂಗೈಕ್ಯ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರಿಗಿದ್ದ ದೂರದೃಷ್ಟಿಯೇ ಕಾರಣ. ವಜ್ರ ಮಹೋತ್ಸವ ಆಚರಣೆಯ ಸಂಭ್ರಮದಲ್ಲಿರುವ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ೧೩ ಪದವಿ, ೧೨ ಸ್ನಾತಕೋತ್ತರ ಪದವಿ, ೧೫ ಸಂಶೋಧನಾ ವಿಭಾಗವನ್ನೊಳಗೊಂಡು ಪ್ರತಿವರ್ಷ ೪೦೦೦ ವಿದ್ಯಾರ್ಥಿಗಳನ್ನು ತಾಂತ್ರಿಕ ಪರಿಣಿತರನ್ನಾಗಿ ಸಮಾಜಕ್ಕೆ ಕೊಡುಗೆಯಾಗಿ ನೀಡುತ್ತಿದ್ದು ಕಾಯಕ ಧರ್ಮವೆಂಬುದು ಸಿದ್ಧಗಂಗಾ ಸಂಸ್ಥೆಗಳಲ್ಲಿ ಹಾಸುಹೊಕ್ಕಾಗಿದೆ. ಜಾಗತಿಕ ನಾಯಕತ್ವ ಬೆಳೆಸುವ ನಿಟ್ಟಿನಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಅವಶ್ಯಕವಾಗಿದ್ದು ಪರಿಣಾಮಕಾರಿಯಾಗಿರುವ ಈ ನೀತಿ ರಾಷ್ಟ್ರವನ್ನು ಹೊಸದಿಕ್ಕಿಗೆ ಕೊಂಡೊಯ್ಯಲಿದೆ. ರಾಷ್ಟ್ರೀಯ ಶಿಕ್ಷಣ ನೀತಿಯಿಂದಾಗಿ ಯುವ ಸಮುದಾಯದಲ್ಲಿ ಕೌಶಲಾಭಿವೃದ್ಧಿಗೆ ಒತ್ತು ನೀಡಲಾಗಿದ್ದು, ವಿದ್ಯಾರ್ಥಿಗಳ ಪ್ರತಿಭೆಗೆ ತಕ್ಕಂತೆ ಕೌಶಲ್ಯ ದೊರೆಯಲಿದೆ. ಭಾರತೀಯ ಶಿಕ್ಷಣ ಸಂಸ್ಕೃತಿಗೆ ಜಾಗತಿಕ ಮನ್ನಣೆ ಇದೆ. ಪದವಿ ಪಡೆದಿರುವ ವಿದ್ಯಾರ್ಥಿಗಳು ದೇಶಕ್ಕೆ ಕೊಡುಗೆ ನೀಡುವ ಕಡೆ ಶ್ರಮಿಸುವಂತಾಗಲಿ" ಎಂದು ಹೇಳಿದರು.

ಕಾಲೇಜಿಗೆ ಟಾಪರ್ ಆದ ೨೦೧೯–೨೦ನೇ ಸಾಲಿನ ಇಂಡಸ್ಟ್ರೀಯಲ್ ಇಂಜಿನಿಯರಿಂಗ್ ಅಂಡ್ ಮ್ಯಾನೇಜ್ ಮೆಂಟ್‌ನ ವಿದ್ಯಾರ್ಥಿನಿ ಹುಸ್ನಿಯಾ ಖಾನಂಗೆ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ವಿಶೇಷ ಚಿನ್ನದ ಪದಕ ನೀಡಿ ಗೌರವಿಸಲಾಯಿತು. ಘಟಿಕೋತ್ಸವ ಸಮಾರಂಭದಲ್ಲಿ ಒಟ್ಟು ೧೧೯೫ ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡ ಲಾಯಿತು. ಅಲ್ಲದೆ ೧೨ ವಿಭಾಗದ ಅತ್ಯುನ್ನತ ಅಂಕ ಪಡೆದವರಿಗೆ ಚಿನ್ನದ ಪದಕ ನೀಡಿ ಗೌರವಿಸಲಾಯಿತು.

ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭಿಸ ಲಾಯಿತು. ಪ್ರಾಚಾರ್ಯರಾದ ಡಾ. ಎಸ್.ವಿ. ದಿನೇಶ್ ಅವರು ಸ್ವಾಗತಿಸಿದರು. ಕಾಲೇಜಿನ ನಿರ್ದೇಶಕರಾದ ಡಾ. ಎಂ.ಎನ್. ಚನ್ನಬಸಪ್ಪನವರು ಪ್ರತಿಜ್ಞಾ ವಿಧಿಯನ್ನು ಬೋಧಿಸಿದರು. ಅತಿಥಿಗಳ ಪರಿಚಯವನ್ನು ಸಿಇಓ ಡಾ. ಶಿವಕುಮಾರಯ್ಯ ಅವರು ಮಾಡಿಕೊಟ್ಟರು. ವೇದಿಕೆಯಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ಅವರು ಉಪಸ್ಥಿತರಿದ್ದರು. ರಾಷ್ಟ್ರಗೀತೆ ಯೊಂದಿಗೆ ಸಮಾರಂಭ ಮುಕ್ತಾಯವಾಯಿತು.







ಲೇಖನ

# ವಿಶ್ವಶಾಂತಿ

– ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಿದ್ಧಗಂಗಾ ಮಠ, ತುಮಕೂರು

ವಿಹಾಯ ಕಾಮಾನ್ ಯಸ್ಸರ್ವಾನ್‌ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಸ್ಸ ಶಾಂತಿಮಧಿಗಚ್ಛತಿ ॥
(ಶ್ರೀಮದ್ಭಗವದ್ಗೀತಾ)

ಜೀವನ ಪ್ರವಾಹವು, ಆಸೆ, ಅಭಿಮಾನ, ಅಂಜಿಕೆಗಳ ದುರ್ಗಮಾರಣ್ಯವನ್ನು ಪ್ರವೇಶಿಸಿದಂತೆಲ್ಲ ಪ್ರಪಾತ, ಗರ್ತ, ಭಯಂಕರ ನಿನಾದಗಳು ಅನಿವಾರ್ಯ. ಅಲ್ಲಿ ಗಂಭೀರವೂ, ಶಾಂತವೂ, ಸುಂದರವೂ ಆದ ರೂಪದರ್ಶನವಿಲ್ಲ. ಆಸೆಗೆ ಕೊನೆಯಿಲ್ಲ. ಅಂಜಿಕೆಗೆ ಮಿತಿಯಿಲ್ಲ. ಅಭಿಮಾನಕ್ಕೆ ಪಾರವಿಲ್ಲ. ಆಸೆ ಹೆಚ್ಚುವಂತೆಲ್ಲ ಅಂಜಿಕೆಯೂ ಬೆಂಬಳಿವಿಡಿದು ಬಂದೇ ಬರುವುದು. ಇವುಗಳ ಪ್ರಭಾವಕ್ಕೆ ಒಳಗಾಗಿ ಅವನ್ನು ಹಿಂಬಾಲಿಸುತ್ತಿರುವ ಮಾನವನಿಗೆ ಜೀವನದಲ್ಲಿ ಸುಖವಿಲ್ಲ, ಶಾಂತಿಯಿಲ್ಲ, ತಣಿವಿಲ್ಲ, ಪ್ರಪಂಚದ ಮಹಾವಿಪ್ಲವಗಳಿಗೆಲ್ಲ ಈ ಆಸೆಯೇ ಬೀಜ. ರಾಜ್ಯಲೋಭ, ಧನಲೋಭ, ಪ್ರತಿಷ್ಠಾ ಪ್ರಿಯತೆಗಳಿಂದ ಪ್ರೇರಿತವಾಗಿರತಕ್ಕ ಕೆಲವು ಮಂದಿ ನಾಯಕರು ತಮ್ಮ ಸ್ವಾರ್ಥ ಸಾಧನೆಗೆ ಜನತೆಯನ್ನು ಭೀಕರ ಸಂಗ್ರಾಮಗಳಿಗೆ ಗುರಿಮಾಡುವುದು ಅನುಭವದ ಮಾತಾಗಿದೆ. ಸುಮಾರು ಅರ್ಧ ಶತಮಾನಕ್ಕಿಂತಲೂ ಕಡಿಮೆ ಅವಧಿಯಲ್ಲಿ ಎರಡು ಘೋರ ಸಂಗ್ರಾಮಗಳಾಗಿ, ಜನತೆಯ ಜೀವನ ಮಟ್ಟವನ್ನು ಉನ್ನತಿಗೊಳಿಸಲು ಅತ್ಯಾವಶ್ಯಕವಾದ ಭೌತಿಕ ವಸ್ತುಗಳ ಸಂಪತ್ತು ಅಪಾರವಾಗಿ ನಷ್ಟವಾದದ್ದಲ್ಲದೆ, ಭೀಕರ ರಕ್ತಪಾತವಾಗಿ ಕೋಟ್ಯಾಂತರ ಮಾನವರು ಆಹುತಿಯಾದರು. ಈ ದುರ್ದಮ ಯುದ್ಧಗಳಿಂದದುಂಟಾದ ದುರಂತ ಪರಿಣಾಮಗಳನ್ನನುಭವಿಸಿದ, ಅನುಭವಿಸುತ್ತಿರುವ ವಿಶ್ವದ ಬೇರೆ ಬೇರೆ ಜನಾಂಗಗಳು ಶಾಂತಿಗಾಗಿ ಹಾತೊರೆಯುತ್ತಾ "ಶಾಂತಿ ಬೇಕು, ಶಾಂತಿ ಬೇಕು" ಎನ್ನುವ ಕೂಗನ್ನು ಕೂಗುತ್ತಿರುವುದು ಕೇಳಿಬರುತ್ತಿದೆ. ಈ ಕೂಗುಗಳಿಗೆ ಮನ್ನಣೆಯಿತ್ತು, ವಿಶ್ವದಲ್ಲಿ ಶಾಂತಿಯನ್ನು ಸ್ಥಾಪಿಸಿ, ಸಂತಪ್ತ ಹೃದಯಗಳಿಗೆ ತಣಿವನ್ನು ನೀಡುವ ಶಕ್ತಿಸಾಮರ್ಥ್ಯಗಳು ಇಂದಿನವರಿಗಿರುವುವೇ? ಮತ್ತೊಮ್ಮೆ ಜಗತ್ತಿನಲ್ಲಿ ಚಿರಶಾಂತಿಯು ನೆಲೆಗೊಂಡು ಎಲ್ಲರೂ ಸುಖಶಾಂತಿಯಿಂದ ಜೀವನಪಥವನ್ನು ಸಾಗಿಸುವ ಸೌಭಾಗ್ಯ ಒದಗಬಹುದೇ? ವಿಶ್ವಶಾಂತಿಯನ್ನು ನೆಲೆಗೊಳಿಸಲು ವಿಶ್ವದ ಯಾವುದೇ ಒಂದು ರಾಷ್ಟ್ರವು ವೈಶಿಷ್ಟ್ಯವನ್ನು ಪಡೆದಿದೆಯೇ? ಈ ಮುಂತಾದ ಜಟಿಲ ಪ್ರಶ್ನೆಗಳಿಗೆ ಉತ್ತರವನ್ನು ದೊರಕಿಸುವುದೊಂದು ಬೃಹತ್ ಸಮಸ್ಯೆಯಾಗಿದೆ.

ಮೊದಲನೆಯ ಮಹಾ ಸಂಗ್ರಾಮದಿಂದಾದ ಭೀಕರ ಪರಿಣಾಮಗಳ ಕಹಿ ಅನುಭವವನ್ನು ಹೊಂದಿ ಮನನೊಂದ ಕೆಲಮಂದಿ ಮಹಾನಾಯಕರು, ಮತ್ತೊಮ್ಮೆ ಮಹಾಯುದ್ಧಗಳು ಸಂಭವಿಸದಂತೆ ಸೂಕ್ತ ಆಲೋಚನೆಗಳನ್ನು ಮಾಡಿ, ಕಾರ್ಯಕ್ರಮಗಳನ್ನು ಕೈಕೊಳ್ಳುವ ಸಲುವಾಗಿ ರಾಷ್ಟ್ರಗಳ ಒಕ್ಕೂಟ (Leage of Nations)ವನ್ನು ಸ್ಥಾಪನೆ ಮಾಡಿ, ಆ ಮೂಲಕ ಧ್ಯೇಯ ಸಾಧನೆ ಮಾಡಬೇಕೆಂದು ಸಂಕಲ್ಪಿಸಿದರು. ಆದರೆ ಆ ಸಂಸ್ಥೆಯು ತನ್ನ ಕಾರ್ಯವನ್ನು ಮಾಡಿ ಕೃತಕೃತ್ಯವಾಗದೆ ಅಪಜಯವನ್ನು ಹೊಂದಿತು. ಮೊದಲಿಗಿಂತಲೂ ಕರಾಳ ಸ್ವರೂಪದ ಮಹಾಯುದ್ಧವೊಂದು ನಡೆದು, ವಿಶ್ವವೆಲ್ಲವನ್ನು ಭಯಂಕರ ವಿಪತ್ತಿಗೆ ಗುರಿ ಮಾಡಿತು. ಈ ಮಹಾ ವಿಪ್ಲವದ ಪರಿಣಾಮವಾಗಿ ಜಗತ್ತಿನ ಸ್ಥಿತಿ ಗತಿಗಳೆಲ್ಲವು ರೂಪಾಂತರ ಹೊಂದಿ ಮಾನವ ಜೀವನದ ರೂಪು ರೇಷೆಗಳೆಲ್ಲವೂ ಪರಿವರ್ತನೆಯಾಗಿ, ದೃಷ್ಟಿಕೋನವೇ ಬದಲಾಯಿಸಿ ಮನ್ವಂತರವಾರಂಭವಾದ ಹಾಗೆ ಭಾಸವಾಗುತ್ತದೆ. ಮತ್ತೊಮ್ಮೆ ಮಹಾಯುದ್ಧವಾಗಿ ಜಗತ್ತಿನ ಸ್ವರೂಪವೇ ನಾಶವಾಗುವಂಥ

---

ಪರಮಪೂಜ್ಯ ಶ್ರೀಗಳವರು ೫೦ ವರ್ಷಗಳ ಹಿಂದೆ ಬರೆದ ಲೇಖನ – ಸಂ.







ವಿಪತ್ತನ್ನು ಪರಿಹಾರ ಮಾಡಿ ವಿಶ್ವಶಾಂತಿಯನ್ನು ಸ್ಥಾಪಿಸಲು ಏರ್ಪಡಿಸಿರತಕ್ಕ ವಿಶ್ವಸಂಸ್ಥೆಯು ತನ್ನ ಗುರುತರವಾದ ಜವಾಬ್ದಾರಿಯನ್ನು ತೃಪ್ತಿಕರವಾಗಿ ನಡೆಸುವುದನ್ನು ಕಾದು ನೋಡಬೇಕಾಗಿದೆ.

ಭೌತಿಕ ಪ್ರಗತಿಯೇ ಮಾನವ ಜೀವನದ ಪರಮ ಧ್ಯೇಯವೆಂದೂ, ಉನ್ನತಮಟ್ಟದ ಲೌಕಿಕ ಸೌಲಭ್ಯಗಳು ಸಮಸ್ತ ಸುಖ ಶಾಂತಿಗಳಿಗೆ ಸಾಧನವೆಂದೂ ನಂಬಿರುವ ಜನತೆಯ ಸಂಖ್ಯೆಯು ಹೆಚ್ಚಿ, ವಿಜ್ಞಾನದ ಸಹಕಾರದಿಂದ ಅತ್ಯುಚ್ಚ ಮೇಲ್ಮೆಯನ್ನು ಪಡೆಯಬೇಕೆಂದು ಹಂಬಲಿಸುತ್ತಿದೆ. ವಿಜ್ಞಾನಿಗಳು ತೀವ್ರಗತಿಯಿಂದ ತಮ್ಮ ಪ್ರಯತ್ನವನ್ನು ಮುಂದುವರಿಸಿ, ತಮ್ಮ ಅದ್ಭುತವಾದ ಧೀಶಕ್ತಿಯಿಂದ ಸೃಷ್ಟಿಯ ಗರ್ಭದಲ್ಲಿ ಹುದುಗಿರುವ ಶಕ್ತಿಗಳನ್ನು ಹೊರಗೆಡವಿ ಅನೇಕ ಯಂತ್ರ ತಂತ್ರ ಶಸ್ತ್ರಾಸ್ತ್ರಗಳನ್ನು ಕಂಡುಹಿಡಿದು, ಇವುಗಳ ನೆರವಿನಿಂದ ಮಾನವನಿಗೆ ಅಲ್ಪ ಶ್ರಮದಿಂದ ಅಧಿಕವಾದ ಸುಖವನ್ನು ದೊರಕಿಸಬೇಕೆಂದು ಹವಣಿಸುತ್ತಿದ್ದಾರೆ. ವಿಜ್ಞಾನದ ಬೆಳವಣಿಗೆಯಿಂದ ದೇಶಕೃತ ಕಾಲಕೃತ ಅಂತರಾಯಗಳೆಲ್ಲವೂ ಹೋಗಿ ವಿಶ್ವದ ಬೇರೆ ಬೇರೆ ರಾಷ್ಟ್ರಗಳೆಲ್ಲವೂ ಅಕ್ಕಪಕ್ಕದ ಗ್ರಾಮಗಳವರಂತೆ ಪರಸ್ಪರ ಪರಿಚಯದಿಂದ ಬಾಳುವಿಕೆ ಮಾಡುವ ಸೌಲಭ್ಯಗಳುಂಟಾಗಿವೆ. ಚಮತ್ಕಾರ ಜನಕ, ವಿಸ್ಮಯಕಾರಿ ಸಂಶೋಧನೆಗಳು ಹೊರಬಿದ್ದು ಮಾನವನ ಬುದ್ಧಿ ಶಕ್ತಿಯ ಅಪ್ರತಿಮವಾದ ಸಾಹಸವನ್ನು ವ್ಯಕ್ತಪಡಿಸುತ್ತಿವೆ. ತಣಿವಿಲ್ಲದೆ, ಬಿಡುವಿಲ್ಲದೆ ಸಂಶೋಧನೆಗಳು ನಡೆಯುತ್ತಿವೆ. ಮುಂದೆ ವಿಜ್ಞಾನದಿಂದ ಪ್ರಪಂಚವು ಯಾವ ಸ್ಥಿತಿಯನ್ನು ಮುಟ್ಟಬಹುದೆಂಬುದನ್ನು ಹೇಳಲು ಸಾಧ್ಯವಿಲ್ಲ.

ವಿಜ್ಞಾನವೇನೋ ಬೆಳೆದಿದೆ. ವಿಜ್ಞಾನವನ್ನು ಹಿಂಬಾಲಿಸುವ ದಾಹವೂ ತೀಕ್ಷ್ಣವಾಗಿದೆ. ಈ ವಿಜ್ಞಾನವೇ ಜೀವನದ ಸರ್ವಸ್ವವೆಂದೂ ಯಂತ್ರ ನಾಗರಿಕತೆಯೇ ಜೀವಿತದ ಆದರ್ಶವೆಂದೂ ನಂಬಿ ಶ್ರಮಿಸುತ್ತಿರುವವರಿಗೆ, ಸಮಗ್ರ ಜೀವನದ ಸುಂದರ ಸ್ವರೂಪವೂ ಅರಿವಾಗಲಾರದೆನ್ನುವ ವಿಚಾರವೂ ಹೊಳೆಯಹತ್ತಿದೆ. ಜೀವಿತವು ಪ್ರಕಾಶವಾಗಬೇಕಾದರೆ ಶಾಂತಿಯೊಡ ಮೂಡಬೇಕು. ಆನಂದಾವಿರ್ಭಾವವಾಗಬೇಕು. ವಿಜ್ಞಾನದ ಉಪಾಸಕರಿಗೆ ಸುಖ ಶಾಂತಿಗಳು ದೊರೆತಿಲ್ಲ; ಆಶೆಯಡಗಿಲ್ಲ; ತೃಪ್ತಿ ಲಭಿಸಿಲ್ಲ. ಲಭಿಸಿದ್ದನ್ನು ಕಿರಿದು ಮಾಡಿ, ಲಭಿಸದಿದ್ದುದನ್ನು ಹಿರಿದುಮಾಡಿ, ಹಿರಿದರ ಪ್ರಾಪ್ತಿಗಾಗಿ ಕಸಿವಿಸಿಗೊಂಡು ಧಾವಿಸುತ್ತಿರುವ ಅಶಾಂತ ಜೀವನದ ಚಿತ್ರಗಳೇ ದೃಗ್ಗೋಚರವಾಗುತ್ತಿವೆ. ಮಾನವೀಯತೆಯ ಲಕ್ಷಣಗಳನ್ನತಿಕ್ರಮಿಸಿ ಮೃಗಸ್ವರೂಪ ಜೀವನದ ಆದರ್ಶಗಳು ಬೆಳೆಯುತ್ತಿವೆ. ವಿಜ್ಞಾನದ ಹಿರಿಮೆಗಳನ್ನು ಮನಸಾರ ಪ್ರಶಂಸೆ ಮಾಡುತ್ತಿದ್ದ ಒಬ್ಬ ವಿಜ್ಞಾನಿಗೆ, ಜ್ಞಾನಿಯಾದ ರೈತನೊಬ್ಬನು ಪ್ರತ್ಯುತ್ತರವಾಗಿ ಹೇಳಿದ : "We have learnt to fly in air like birds; we have learnt to swim in water like fish; but unfortunately we have not learnt to live on earth as men" – "ನಾವು ಆಕಾಶದಲ್ಲಿ ಪಕ್ಷಿಗಳ ಹಾಗೆ ಹಾರುವುದನ್ನು ಕಲಿತಿದ್ದೇವೆ; ನೀರಿನಲ್ಲಿ ಮೀನುಗಳ ಹಾಗೆ ಈಜುವುದನ್ನು ಕಲಿತಿದ್ದೇವೆ; ಮರ್ತ್ಯಲೋಕದಲ್ಲಿ ಮಾನವರಾಗಿ ಬಾಳುವುದನ್ನು ಕಲಿಯದಿರುವುದೊಂದು ಮಹಾದೌರ್ಭಾಗ್ಯ" ಎಂಬ ಮಾತುಗಳು ಸಮಂಜಸವೂ ಸುಂದರವೂ ಆಗಿರತಕ್ಕ ವಿಚಾರವನ್ನು ನಾವು ಗಮನಿಸಬಹುದು.

ಯಂತ್ರನಾಗರಿಕತೆಯ ಶ್ರದ್ಧಾಪೂರ್ವಕ ಉಪಾಸನೆಯಿಂದಾಗಲಿ, ವಿಶ್ವಸಂಸ್ಥೆಗಳಂಥ ತಜ್ಞರ ಸಮಿತಿಗಳಿಂದಲೇ ಆಗಲಿ ಎಲ್ಲರ ಬಯಕೆಯ ಶಾಂತಿಯು ಸ್ಥಾಪಿಸಲ್ಪಡದಿರಲು ಕಾರಣಗಳೇನು? ಶಾಂತಿ ಸ್ಥಾಪನೆಯ ಮಾರ್ಗದಲ್ಲಿ ಎದ್ದು ನಿಂತಿರುವ ಪ್ರತಿಬಂಧಕಗಳಾವುವು? ನಿರಂತರ ಉದ್ಭವಿಸುತ್ತಿರುವ ಎಡರು ತೊಡರುಗಳನ್ನು ಎದುರಿಸಿ, ಸಂಯಮಗೊಳಿಸಿ ಶಾಂತಿಯನ್ನು ಸ್ಥಾಪಿಸುವುದು ಶಕ್ಯವಾದೀತೇ? ಆ ಶಕ್ತಿಯನ್ನು ಪಡೆದಿರುವವರು ಇರುವರೇ? ಶಾಂತಿ ಸ್ಥಾಪನೆಯ ಮಾರ್ಗಗಳಾವುವು? ಈ ಕೆಲವು ಮುಖ್ಯ ಪ್ರಶ್ನೆಗಳು ಇಂದಿನ ಜಗತ್ತಿನ ಮುಂದೆ ಮಹಾ ಸಮಸ್ಯೆಗಳಾಗಿವೆ.

'ಶಾಂತಿ' ಎನ್ನುವ ಶಬ್ದವನ್ನು ದಿನಬಳಕೆಯಲ್ಲಿ ಪ್ರಯೋಗ ಮಾಡುತ್ತಿದ್ದೇವೆ. ದಿನವಹಿ ವೃತ್ತಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಅಣುಬಾಂಬಿನ ಪ್ರಯೋಗದಿಂದಲಾದರೂ ಶಾಂತಿಯನ್ನು ಸ್ಥಾಪಿಸುವುದೇ ತನ್ನ ಬಯಕೆಯಾಗಿದೆಯೆಂದು ಹಿಂದೆ ಅಮೆರಿಕಾ ಅಧ್ಯಕ್ಷರಾಗಿದ್ದ ಟ್ರೂಮನ್ನರು ಘೋಷಣೆ ಮಾಡಿದ್ದರು. ಶಾಂತಿ ಸ್ಥಾಪನೆಯ ಉದ್ದೇಶದಲ್ಲಿ ತಮ್ಮ ಪ್ರಯತ್ನಕ್ಕೆ ಇಂಗ್ಲೀಷಿನವರೂ ಅಮೆರಿಕನ್ನರೂ ಸಹಕರಿಸದೇ ವಿಘ್ನವನ್ನು ತರುತ್ತಿರುವ







ರೆಂದು ರಷ್ಯಾದವರು ಘೋಷಿಸುತ್ತಿರುವರು. ಪ್ರತಿಯೊಬ್ಬರೂ–ಸೋಮಾರಿ, ಜೂಜುಕೋರ, ಡಕಾಯಿತ, ಕವಿ, ತತ್ತ್ವಜ್ಞಾನಿ – ಎಲ್ಲರೂ ಶಾಂತಿಯನ್ನು ಬಯಸತಕ್ಕವರೇ ಆಗಿದ್ದಾರೆ, ಬಳಸತಕ್ಕವರ ಭಾವದ ಮೇಲೆ ಉಪಯೋಗಿಸತಕ್ಕವರ ದೃಷ್ಟಿಯ ಮೇಲೆ, "ಶಾಂತಿ" ಶಬ್ದಕ್ಕೆ ನಾನಾ ವಿಧವಾದ ಅರ್ಥಗಳನ್ನು ಕಲ್ಪಿಸಬಹುದು. Mr. Horace Alexander ಎಂಬವರು ಹೇಳಿರುವುದೇನೆಂದರೆ :–

"It is a superficial judgement that sees humanity as a mass of innocent people wanting to be left in peace while a few war-mongers seize power and then force the people to fight their battle. 'Wanting to be left in peace' is a selfish desire. Selfishness cannot be true peace. The wealthy miser who has contrived to pile up his millions by grinding the poor till they starve, wants to be left in peace to enjoy his ill-gotton gains. But he has been sowing the seeds of war all his life and cannot complain if he finally reaps what he has sown."

ಮಾನವ ಸಮಾಜವು, ಶಾಂತಿಯಿಂದ ಬಾಳಲು ಇಚ್ಛೆಯುಳ್ಳ ಸರಳ ಜನಗಳ ಸಮೂಹವೆಂದು ನಂಬುವುದು ತೋರಿಕೆಯ ಅಭಿಪ್ರಾಯ. ಕೆಲವು ಮಂದಿ ಯುದ್ಧಪ್ರಚೋದಕರು ಅಧಿಕಾರವನ್ನು ಆಕ್ರಮಣ ಮಾಡಿ ತಮ್ಮ ಸಲುವಾಗಿ ಯುದ್ಧ ಮಾಡಲು ಜನತೆಯನ್ನು ತಳ್ಳುವುದು ಅನಿವಾರ್ಯ. ಶಾಂತಿಯಲ್ಲಿರುವಂತೆ ಅವಕಾಶವನ್ನೀಯಬೇಕೆಂಬುದೊಂದು ಸ್ವಾರ್ಥದ ಬಯಕೆ. ಸ್ವಾರ್ಥ ಸಾಧನೆಯು ಶಾಂತಿಯಾಗಲಾರದು. ಬಡವರನ್ನು ಶೋಷಣೆ ಮಾಡಿ ಅವರ ರಕ್ತವನ್ನು ಹೀರಿ ಧನಿಕನಾಗಿರುವ ಲೋಭಿ ಶ್ರೀಮಂತನು ಅನೀತಿ ಮಾರ್ಗದಿಂದ ಗಳಿಸಿದ ಭಾಗ್ಯವನ್ನು ನಿರಾತಂಕವಾಗಿ ಭೋಗಿಸಲು ಅನುಕೂಲವಾಗತಕ್ಕ ಶಾಂತಿಯನ್ನು ಬಯಸುತ್ತಾನೆ. ಆದರೆ ಆತನು ತನ್ನ ಜೀವಮಾನದಲ್ಲೆಲ್ಲಾ ಯುದ್ಧದ ಬೀಜಗಳನ್ನು ಬಿತ್ತುತ್ತಿರುತ್ತಾನೆ. ಅಂತ್ಯದಲ್ಲಿ ಮಾಡಿದ್ದುಣ್ಣಬೇಕಾದ ಸಂದರ್ಭವೊದಗಿದಾಗ ಯಾರನ್ನೂ ಆಕ್ಷೇಪಿಸುವಂತಿಲ್ಲ. ವೈಯಕ್ತಿಕ ಹಿತಗಳನ್ನು ಅಭಿರುಚಿಗಳನ್ನೂ ಅನುಸರಿಸಿ 'ಶಾಂತಿ' ಶಬ್ದಕ್ಕೆ ನಾನಾ ಅರ್ಥಗಳು ಕಲ್ಪಿತವಾಗಿವೆ.

ಶಾಂತಿ ತತ್ತ್ವವನ್ನು ಪರಿಪೂರ್ಣಗೊಳಿಸಲು ತಲೆತಲಾಂತರಗಳಿಂದ ಭರತಖಂಡವು ಶ್ರಮಿಸಿದೆ. ಭಾರತೀಯ ಮಹರ್ಷಿಗಳು, ಸಾಧುಗಳು, ಸಂತರು, ಶರಣರು, ಪರಾಶಾಂತಿಯೆಂದೂ, ಅಪರಾಶಾಂತಿಯೆಂದೂ ಶಾಂತಿಯನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದುವುದು, ಅರ್ಥಾತ್ ಬ್ರಹ್ಮನಲ್ಲಿ ಲೀನವಾಗುವುದು, ಜೀವಾತ್ಮನು ವಿಶ್ವಾತ್ಮನಲ್ಲಿ ಐಕ್ಯವಾಗುವುದು, ಜೀವನು ಶಿವನಾಗುವುದು, ಅಂಗವು ಲಿಂಗವಾಗುವುದು – ಇದೇ ಮಾನವ ಜೀವಿತದ ಮಹಲಕ್ಷ್ಯ. ಇದೇ ಪರಾಶಾಂತಿ. ಈ ಪರಾಶಾಂತಿಯನ್ನು ಹೊಂದುವುದೇ, ಎಂದರೆ ಮುಕ್ತಿಯನ್ನು ಗಳಿಸುವುದೇ ಮಾನವನ ಧ್ಯೇಯವೆಂದು ದರ್ಶನಗಳು ಸಾರಿರುವುವಲ್ಲದೆ, ಎಲ್ಲಾ ದರ್ಶನಗಳೂ ಮುಕ್ತಿಯ ಸಾಧನೋಪಾಯಗಳನ್ನು ಬೋಧಿಸಿ ಸಾಧಕನನ್ನು ಸಿದ್ಧನನ್ನಾಗಿ ಮಾಡುವ ಸಲುವಾಗಿಯೇ ಚರಿತಾರ್ಥವಾಗಿವೆ.

ಅಪರಾಶಾಂತಿಯ ಸ್ವರೂಪವನ್ನು ನಿಷ್ಕೃಷ್ಟವಾಗಿ ಬಣ್ಣಿಸುವುದು ದುಸ್ಸಾಧ್ಯ. ಅದೊಂದು ಸಸಬಂಧಿಕ ಮಾತು. ಮಾನವ ಜೀವನದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಅದನ್ನು ನಿರ್ದೇಶಿಸುವುದಾದರೆ ಸ್ವಾತಂತ್ರ್ಯ, ಸಮತೆ, ಸೌಹಾರ್ದ – ಎನ್ನುವ ತತ್ತ್ವಗಳನ್ನು ಎತ್ತಿಹಿಡಿದು, ಅಭಾವ, ಅಜ್ಞಾನ, ಅನ್ಯಾಯ, ಅಂಜಿಕೆ, ಹಿಂಸೆ, ತುಳಿತ, ಉಚ್ಚನೀಚ ಕಲ್ಪನೆಗಳು, ಸಂಕುಚಿತ ಭಾವಗಳು – ಇವುಗಳ ಉಪಟಳವಿಲ್ಲದೆ ಮನುಷ್ಯನ ವಿಕಾಸಕ್ಕೆ ಅವಶ್ಯಕವಾದ ಎಲ್ಲಾ ಸೌಲಭ್ಯಗಳ ಸಮಾನಾವಕಾಶಗಳುಳ್ಳ ಸ್ಥಿತಿಯೆಂದು ಹೇಳಬಹುದು. ರವೀಂದ್ರನಾಥ ಠಾಕೂರರ ಮಾತಿನಿಂದ ಈ ಸ್ಥಿತಿಯ ಸುಂದರವಾದ ಚಿತ್ರವೊಂದನ್ನು ನಾವು ನೋಡಬಹುದು.

"Where the mind is without fear and head is held high,
Where the world has not been broken up into fragments by narrow domestic walls,
Where words come out from the depth of truth,
Where the tireless striving stretches its arms towords perfection,
Where the clear stream of reason has not lost its way in the dreary desert sand of dead habit,
Where the mind is led forward by Thee into ever









widening thought and action,
Into that heaven of freedom, my Father Let my country awake."

ಇಂದಿನ ಪರಿಸ್ಥಿತಿಯನ್ನವಲೋಕಿಸಿದರೆ ನಿರಾಶಾಮಯ ವಾತಾವರಣವೇ ಸರ್ವತ್ರ ವ್ಯಾಪಕವಾಗಿದೆ. ಯಂತ್ರನಾಗರಿಕತೆಯು ಧನಿಕರನ್ನು ಮತ್ತಷ್ಟು ಧನಿಕರನ್ನಾಗಿಯೂ ದರಿದ್ರರನ್ನು ದಟ್ಟ ದರಿದ್ರರನ್ನಾಗಿಯೂ ಮಾಡುತ್ತಿರುವುದರಿಂದ ಅನ್ನ ಬಟ್ಟೆಗಳ ಹಾಹಾಕಾರವು ಹೆಚ್ಚಿ, ಬಡತನ ಸಮಸ್ಯೆಯೊಂದು ಪೆಡಂಭೂತವಾಗಿ ನಿಂತಿದೆ. ಸಾಮಾಜಿಕ ಸ್ಥಾನಮಾನಗಳಿಗಾಗಿ ಭೀಕರ ಕಲಹಗಳುಂಟಾಗಿ ಜೀವನ ಜರ್ಜರಿತವಾಗಿದೆ. ಆಸುರೀ ಶಕ್ತಿಯ ಪ್ರಭಾವವು ಕರಾಳ ಸ್ವರೂಪವನ್ನು ಹೊಂದಿ ಎಲ್ಲೆಲ್ಲಿಯೂ ಅನ್ಯಾಯ, ಅಸತ್ಯ, ಹಿಂಸೆ, ಕೊಲೆ, ತುಳಿತ, ಗೊಂದಲ, ಅಸಮಾಧಾನಗಳು ತಾಂಡವವಾಡುತ್ತಿವೆ. ಅಸ್ತವ್ಯಸ್ತ ಪರಿಸ್ಥಿತಿಯಿಂದ ಜೀವನವು ಕಸಿವಿಸಿಯಾಗಿ ತೃಪ್ತಿಗಾಗಿ, ಶಾಂತಿಗಾಗಿ ಹಾತೊರೆಯುತ್ತಿದೆ. ಶಾಂತಿ ಸ್ಥಾಪನೆಯು ಅತ್ಯವಶ್ಯವಾಗಿ ಆಗಬೇಕಾಗಿದೆ.

ಜಗತ್ತಿನ ರಾಜಕೀಯ ಧುರೀಣರುಗಳ, ರಾಷ್ಟ್ರ ನಾಯಕರುಗಳ ಸಮಿತಿಗಳನ್ನು ರಚಿಸಿ, ಅಲ್ಲಿ, ತರ್ಕ ವಿತರ್ಕಗಳು ನಡೆದು ಖಂಡನ ಮಂಡನೆಗಳು ಜರುಗಿ ಶಾಂತಿ ನಿರ್ಣಯಗಳನ್ನು ಮಂಡಿಸುವುದರಿಂದ ಶಾಂತಿಯು ಸ್ಥಾಪಿತವಾಗುವ ಭರವಸೆಯಿಲ್ಲ. ಯಾರು "ಶಾಂತಿ" ಎನ್ನುವ ದಿವ್ಯಮಂತ್ರದ ರಹಸ್ಯವನ್ನರಿತವರಾಗಿ ಅಂತರ್ಬಹಿಶ್ಶಾಂತಿಗಳನ್ನಳವಡಿಸಿಕೊಂಡು ಶಾಂತ ಸ್ವರೂಪವಾಗಿರುವರೋ ಅಂಥವರೇ ಶಾಂತಿಯ ಸಂದೇಶವನ್ನು ಜಗತ್ತಿಗೆ ಬೀರಿ ಅಶಾಂತಿಯಿಂದ ಪರಿತಪಿಸುತ್ತಿರುವ ಜನತೆಗೆ ಶಾಂತಿಯನ್ನು ನೀಡಿ, ಶಾಂತಿ ಸಾಮ್ರಾಜ್ಯವನ್ನು ಸ್ಥಾಪಿಸಬಲ್ಲರು. ಭಾರತವರ್ಷದ ಮಹರ್ಷಿಗಳು, ಸಾಧು ಸಂತರು, ಶರಣರು, ದಾಸರು – ಈ ವರ್ಗದಲ್ಲಿ ಅತ್ಯುನ್ನತವಾದ ಸ್ಥಾನವನ್ನು ಗಳಿಸಿದ್ದಾರೆ :

**"ಓಂ ದ್ಯೌಶ್ಶಾಂತಿರಂತರಿಕ್ಷಂ ಶಾಂತಿಃ**
**ಪೃಥಿವೀ ಶಾಂತಿರಾಪಶ್ಶಾಂತಿ ಓಷಧಯಶ್ಶಾಂತಿಃ**
**ವನಸ್ಪತಯಃ ಶಾಂತಿರ್ವಿಶ್ವೇ ದೇವಾ ಶಾಂತಿಃ ಬ್ರಹ್ಮ ಶಾಂತಿಃ**
**ಸರ್ವಶ್ಶಾಂತಿಃ ಶಾಂತಿರೇವಶಾಂತಿಃ"** –

ಈ ದಿವ್ಯ ಮಂತ್ರವನ್ನು ಜಪಿಸುತ್ತಾ ಬ್ರಹ್ಮಾಂಡವೆಲ್ಲವೂ ಶಾಂತ ಸ್ವರೂಪವಾಗಿರಬೇಕೆಂದು ಆಶಿಸಿದವರವರು.

ಭೌತಿಕ ವಸ್ತುಗಳು, ಅರ್ಥಾತ್ ಹೊನ್ನು, ಹೆಣ್ಣು, ಮಣ್ಣುಗಳು ಅನರ್ಥಕಾರಿಗಳೆಂದೂ, ಅಶಾಂತಿಯ ಹೇತುಗಳೆಂದೂ ಶಸ್ತ್ರಾಸ್ತ್ರಗಳು ವಿನಾಶಕಾರಿಗಳೆಂದೂ ಭಾಸವಾಗುತ್ತದೆ. ಸೂಕ್ಷ್ಮ ಪರಿಶೀಲನೆಯಿಂದ ಬಾಹ್ಯ ವಸ್ತುಗಳು ತಾವಾಗಿಯೇ ದುಃಖ ಅಶಾಂತಿಗಳನ್ನುಂಟು ಮಾಡುವುದಿಲ್ಲವೆಂದೂ, ಅವುಗಳನ್ನು ಬಳಸುವ ಮನೋಭಾವ, ನೋಡತಕ್ಕ ದೃಷ್ಟಿಯಲ್ಲಿಯೇ ದೋಷವಿರುವುದೆಂದೂ ಗೊತ್ತಾಗುತ್ತದೆ. ರಾಗ ದ್ವೇಷಗಳು ವಸ್ತುಗಳಲ್ಲಿಲ್ಲ. ಅಮೆರಿಕಾ ದೇಶದಲ್ಲಿ ತಯಾರಾದ ಅಣುಬಾಂಬನ್ನು ವಾಷಿಂಗ್‌ಟನ್ ಮೇಲೆ ಹಾಕಿದರೆ ಅದು ಪಿತೃವಾತ್ಸಲ್ಯದಿಂದ ಶಾಂತವಾಗುವುದಿಲ್ಲ. ರಷ್ಯಾ ದೇಶದ ಕಾರ್ಖಾನೆಗಳಲ್ಲಿ ತಯಾರಾದ ವಿಷವಾಯುವು ರಷ್ಯನ್ನರಿಗೆ ಅಮೃತಪ್ರಾಯವಾಗುವುದಿಲ್ಲ. ವಿದ್ಯುಚ್ಛಕ್ತಿಯ ದೀಪವು ತನ್ನ ಉತ್ಪಾದಕನಿಗೆ ಬೆಳಕನ್ನು ನೀಡಿ ಉಳಿದವರಿಗೆ ಅಂಧಕಾರವನ್ನುಂಟು ಮಾಡುವುದಿಲ್ಲ. ಅವರಿವರೆನ್ನದೆ ಎಲ್ಲರ ಮೇಲೂ ತಮ್ಮ ಪ್ರಕೃತಿಧರ್ಮವನ್ನನುಸರಿಸಿ ಕಾರ್ಯ ಮಾಡುವುದೇ ಲಕ್ಷಣವಾಗಿದೆ. ದ್ವೇಷಾಗ್ನಿಯಿರುವುದು ಮಾನವನ ಹೃದಯದಲ್ಲಿ. ಹೃದಯದಿಂದ ಆಶೆಯು ಉದ್ಭವವಾಗುವುದು ಅವನ ಮನಸ್ಸಿನಲ್ಲಿ. ಅಲ್ಲಮಪ್ರಭುಗಳು ಸಂದೇಶ ಕೊಟ್ಟಿರುವಂತೆ "ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ; ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ; ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ; ಮನದ ಕೊನೆಯ ಆಶೆಯೇ ಮಾಯೆ ಕಣಾ ಗುಹೇಶ್ವರಾ." ಮನದ ಆಶೆಯೇ ಮಹಾ ವಿಪತ್ಕಾರಿಯಾಗಿರುವುದು. ಹೃದಯದಿಂದ ಹೊರ ಹೊರಟ ಈ ದ್ವೇಷಜ್ವಾಲೆಯು ಶಸ್ತ್ರಾಸ್ತ್ರಗಳನ್ನು ಸಾಧನವನ್ನಾಗಿ ಮಾಡಿಕೊಂಡು ಹತ್ಯಾಕಾಂಡವನ್ನು ನೆರವೇರಿಸುತ್ತದೆ. ಬಳಸುವ ಭಾವ ನೋಡುವ ದೃಷ್ಟಿ ಪವಿತ್ರವೂ ಸಮೀಚೀನವೂ ಆದರೆ ಈ ವಸ್ತುಗಳೆಲ್ಲವನ್ನೂ ಶಕ್ತಿಗಳೆಲ್ಲವನ್ನೂ ಸಾಧಕವಾಗಿ ಪರಿವರ್ತನೆ ಮಾಡಿಕೊಳ್ಳಬಹುದು. ಭಾವ ದೃಷ್ಟಿಗಳು ಮಲಿನವಾದರೆ ಅವು ಬಾಧಕವಾಗಿ ಬಳಸಲ್ಪಡುವುವು.

ಸರ್ವ ಅಶಾಂತಿಗೂ ಮೂಲ ಮಾನವನ ಹೃದಯ, ಅವನ ಮನಸ್ಸು. ಜಗತ್ತಿನಲ್ಲಿ ಶಾಂತಿಯು ಒಡಮೂಡಿ ನೆಲಸಬೇಕಾದರೆ ವ್ಯಕ್ತಿಗಳ ಆತ್ಮವಿಕಾಸವಾಗಬೇಕು. ಹೃದಯಗಳು ಅರಳಬೇಕು, ಮನಸ್ಸುಗಳು ಪವಿತ್ರವಾಗಬೇಕು. ಮಾನವನ ಬಾಹ್ಯ ವ್ಯಾಪಾರಗಳೆಲ್ಲಕ್ಕೂ ಅವನ





ಭಾವನೆಗಳೂ ಮತ್ತು ಮನಸ್ಸೇ ಮೂಲ. ಭಾವದಲ್ಲಿ ಸೆಲೆಯೊಡೆದು ಮನಸ್ಸಿನಲ್ಲಿ ಉದ್ಭವವಾಗತಕ್ಕ ವಿಚಾರಗಳು ಮಾತಿನ ಸ್ವರೂಪದಲ್ಲಿಯೂ ಕೃತಿಯ ಸ್ವರೂಪದಲ್ಲಿಯೂ ವ್ಯಕ್ತವಾಗುತ್ತವೆ. ಮನಸ್ಸು ಪರಿಶುದ್ಧವಾದರೆ ಭಾಷೆಗೆ ಗಾಂಭೀರ್ಯ, ಕೃತಿಗೆ ಸೊಬಗು ಉಂಟಾಗುತ್ತವೆ. ಮೊದಲು ಮನಸ್ಸನ್ನು ಪವಿತ್ರಗೊಳಿಸಬೇಕು. ಮನಸ್ಸು ಚಂಚಲ ಸ್ವಭಾವವುಳ್ಳದ್ದು. ವಿಷಯದಿಂದ ವಿಷಯಕ್ಕೆ, ವಸ್ತುವಿನಿಂದ ವಸ್ತುವಿಗೆ, ವಿಚಾರದಿಂದ ವಿಚಾರಕ್ಕೆ ಧಾವಿಸುವುದು ಅದರ ಸ್ವಭಾವವಾಗಿದೆ. ಅರ್ಜುನನು ಶ್ರೀಕೃಷ್ಣನನ್ನು "ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ । ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥" ಎಂದು ಪ್ರಶ್ನೆ ಮಾಡುತ್ತಾನೆ. "ಧರೆಯನಜಿನದಂತೆ ಸುರುಳಲಹುದು, ಮೇರುಗಿರಿಯನಂಗುಲಿಯ ಕೊನೆಯ ಲಾಳಲಹುದು, ಶರಧಿಯನೊಮ್ಮೆ ಪಾನವ ಮಾಡಲಹುದು ಸೈರಿಸಬಾರದು ನಿಮಿಷಾರ್ಧಮೀ ಮನವನು" ಎಂದು ನಿಜಗುಣ ಶಿವಯೋಗಿಗಳು ಹಾಡಿದ್ದಾರೆ. "ಮನವೆಂಬ ಮರ್ಕಟನ ತಡೆಯಲಾರೆನು ದೇವ ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ" ಎಂದು ಸರ್ಪಭೂಷಣ ಶಿವಯೋಗಿಗಳೂ, "ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು, ಹೊಂದಿದಲ್ಲಿ ಹೊಂದಲೀಯದೆನ್ನ ಮನವು, ನಿಂದಲ್ಲಿ ನಿಲ್ಲಲೀಯದೆನ್ನ ಮನವು" ಎಂದು ಬಸವಣ್ಣನವರೂ ಮನಸ್ಸಿನ ಚಂಚಲಸ್ವಭಾವವನ್ನು ಕುರಿತು ಹೇಳಿದ್ದಾರೆ. ಮನೋನಿಗ್ರಹವು ದುಸ್ಸಾಧ್ಯವಾದರೂ ನಿರಂತರ ಅಭ್ಯಾಸದಿಂದ ಅದನ್ನು ಹದಗೊಳಿಸಬಹುದು. ಅದರ ಸ್ವಚ್ಛಂದ ಪ್ರವೃತ್ತಿಯನ್ನೂ ನಿರೋಧಿಸಬಹುದು. ವಿಧಿ ನಿಷೇಧಾತ್ಮಕ ವ್ರತಗಳೆಲ್ಲವೂ ಮನಸ್ಸನ್ನು ಸಂಯಮಗೊಳಿಸುವುದಕ್ಕಾಗಿಯೇ. ಮನಸ್ಸಿನ ಪ್ರವೃತ್ತಿಯನ್ನು ತಡೆಯುವುದೆಂದರೆ ಅದನ್ನು ನಿರ್ವಿಷಯಕವಾಗಿ ಮಾಡುವುದೆಂದಲ್ಲ. ಮನಸ್ಸು ನಿರ್ವಿಷಯಕವಾಗಲಾರದು. ಅದರ ಪ್ರವೃತ್ತಿಯು ಸದ್ವಿಷಯಗಳ ಚಿಂತನೆಯಲ್ಲಿ, ದೇವನ ಧ್ಯಾನದಲ್ಲಿ ಪ್ರವಹಿಸುವಂತೆ ಪರಿವರ್ತನೆ ಮಾಡುವುದೇ ಸಂಯಮದ ಅರ್ಥ.

ವಿಷಯವಾಸನೆಗಳಿಂದ ದೂರವಾಗಿ ಪರಮಾತ್ಮ ವಿಷಯಕವಾದ ಚಿಂತನೆಯಲ್ಲಿಯೇ ಪ್ರವಹಿಸುವುದೇ ವ್ಯವಸಾಯಾತ್ಮಕವಾದ ಬುದ್ಧಿಯ ಲಕ್ಷಣ. "ವ್ಯವಸಾಯಾತ್ಮಿಕ ಬುದ್ಧಿಃ ಏಕೇಹ ಕುರುನಂದನ । ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ," ವ್ಯವಸಾಯಾತ್ಮಕವಲ್ಲದ ಎಂದರೆ ಸುಸಂಸ್ಕೃತವಲ್ಲದ ಮನಸ್ಸೇ ಬಹುಮುಖವಾಗಿ ಹರಿಯುತ್ತಿರುವುದು. ವ್ಯವಸಾಯಾತ್ಮಿಕಾಬುದ್ಧಿಯು ಅರ್ಥಾತ್ ಸುಸಂಸ್ಕೃತ ಮನಸ್ಸು ಏಕಪಥ ಪ್ರವಾಹಿನಿಯಾಗಿರುವುದು. ಅಭ್ಯಾಸಬಲದಿಂದ ವೈರಾಗ್ಯದ ನೆರವಿನಿಂದ ಪರಿಪೂರ್ಣವಾಗಿ ಹದಗೊಳಿಸಲ್ಪಟ್ಟ ಮನಸ್ಸುಳ್ಳವನೇ ಸುಸಂಸ್ಕೃತ. ಸುಸಂಸ್ಕೃತವಾದ ಮನಸ್ಸೇ ಚಿಂತಾರತ್ನ. ಅಸಂಸ್ಕೃತವಾದ ಮನಸ್ಸೇ ಘಟಸರ್ಪ. ಭಾವ ಬಲಿತು ಮನವು ಪವಿತ್ರವಾಗಿ ಸುಸಂಸ್ಕೃತನ ಮಾತು ಕೃತಿಗಳೆಲ್ಲವೂ ತೇಜೋಮಯವೂ, ಪರಿಶುದ್ಧವೂ ಆಗಿರುತ್ತವೆ. ಮಾನವನ ಹೃದಯ ಮನಸ್ಸುಗಳ ವಿಕಾಸವಾಗಿ, ತುಂಬು ಹೃದಯದಿಂದ ಹೊರ ಹೊರಡುವ ಅವನ ಮಾತುಗಳು ವಿಶ್ವಪ್ರೇಮವನ್ನು ಹೊರಸೂಸುತ್ತಲೂ, ಪವಿತ್ರಾತ್ಮದಿಂದ ಮಾಡುವ ಅವನ ಕೃತಿಗಳೆಲ್ಲವೂ ಜಗತ್ಕಲ್ಯಾಣಕರವಾಗಿಯೂ ಪರಿಣಮಿಸುತ್ತವೆ. ಈತನೇ ನಿಜವಾದ ಸುಸಂಸ್ಕೃತ. ಇದುವೇ ಪವಿತ್ರವಾದ ಸುಸಂಸ್ಕೃತಿ – Culture is what produces sweetness of temper, sanity of mind and strength of Spirit.

ಸುಸಂಸ್ಕೃತರೇ, ಪವಿತ್ರಾತ್ಮರೇ ವಿಶ್ವಶಾಂತಿಯನ್ನು ಸಾಧಿಸಬಲ್ಲರು. "The greatest conceivable worker for peace is he who has himself attained perfection, realised God and eternal absolute Peace – "ಪರಾ ಶಾಂತಿಃ" ಪರಿಪೂರ್ಣತೆಯನ್ನು ಹೊಂದಿ, ದೇವಸಾಕ್ಷಾತ್ಕಾರವನ್ನು ಪಡೆದು ಪರಾಶಾಂತಿಯ ಪ್ರತೀಕವಾಗಿ ಬ್ರಹ್ಮಾನಂದದಲ್ಲಿ ವಿಹರಿಸುತ್ತಿರುವ ಜೀವನ್ಮುಕ್ತರೇ ಶಾಂತಿ ಸ್ಥಾಪನೆಗೆ ದಿವ್ಯ ಅಧಿಕಾರಿಗಳು, ಅವರೇ ದಿವ್ಯಾನಂದಾನುಭವಿಗಳು. ಉಪನಿಷದೋಕ್ತಿಯು "ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ" ಎಂದು ಸಾರುತ್ತದೆ. ಮಹಾನುಭಾವರ ದೃಷ್ಟಿಯಲ್ಲಿ ಜಗತ್ತಿನ ಮಾನವರೆಲ್ಲರೂ ಸರಿಸಮಾನರು, ಉಚ್ಚ ನೀಚ ಕಲ್ಪನೆಗಳಿಲ್ಲ. ಅನಿಮಿತ್ತ ಬಂಧುಗಳವರು. ನಿರ್ವ್ಯಾಜ ಪ್ರೇಮಮಯರವರು. ಸ್ವಯಂ ಶಾಂತಸ್ವರೂಪರಾದ್ದರಿಂದ ಅವರಿರುವ ಕ್ಷೇತ್ರವೇ ಶಾಂತಿಮಂದಿರವಾಗಿ ಸರ್ವತ್ರ ಶಾಂತಿಯನ್ನು ಬೀರುತ್ತಿರುವುದು. ಶಾಂತಿಸ್ಥಾಪನೆಯ ಸಲುವಾಗಿ ಅವರು ಯಾವ ಕಾರ್ಯಗಳನ್ನು ಮಾಡದೆ ಇದ್ದರೂ ವಿಕಸಿತವಾದ ಸುಗಂಧಪುಷ್ಪದ ಸೌರಭವು ಸುತ್ತಮುತ್ತ ಹರಡುವಂತೆ ಆ







ಮಹಾನುಭಾವರ ಜೀವನದ ಸಾನ್ನಿಧ್ಯದಿಂದಲೇ ಶಾಂತಿಯು ಪಸರಿಸುವುದು. ಮಹರ್ಷಿಗಳ, ಸಾಧುಗಳ, ಸಂತರ, ಶರಣರ ಆಶ್ರಮಗಳಲ್ಲಿ ಕ್ರೂರ ಮೃಗಗಳು ತಮ್ಮ ಜಾತಿಸಹಜವಾದ ವೈರವನ್ನು ತೊರೆದು ಪರಸ್ಪರ ಮೈತ್ರೀಭಾವದಿಂದ ಇದ್ದ ಅನೇಕ ನಿದರ್ಶನಗಳಿವೆ. ಅವರು ವಿಶ್ವಕುಟುಂಬಿಗಳು ಶ್ರೀ ಶಂಕರಾಚಾರ್ಯರ ದಿವ್ಯ ವಾಣಿಯು –

**"ಶಾಂತಾ ಮಹಾಂತೋ ನಿವಸಂತಿ ಸಂತಃ**
**ವಸಂತವಲ್ಲೋಕಹಿತಂ ಚರಂತಃ ।**
**ತೀರ್ಣಾ ಸ್ವಯಂ ಭೀಮಭವಾರ್ಣವಂ ಜನಾನ್**
**ಅಹೇತುನಾ ನ್ಯಾನಪಿ ತಾರಯಂತಃ"**

ಶಾಂತಮೂರ್ತಿಗಳ ಅಮೃತ ಆತ್ಮವನ್ನೂ ಜಗತ್ಕಲ್ಯಾಣ ಕರ್ತೃತ್ವವನ್ನೂ ವರ್ಣಿಸುವುದು.

Peace dwells in the heart of those who love God. Realise that your life without him is barren. Yearn for him and peace will follow.

Blessed are the pure in the heart for they shall see God.

ಇವರೆಲ್ಲರೂ ದೈವೀಮಾನವರು, ಮಹಾನುಭಾವರು. ಆಗಾಗ್ಗೆ ಅವತಾರ ಮಾಡಿ ಮಾನವಕುಲವನ್ನು ಉದ್ಧಾರ ಮಾಡಿದ್ದಾರೆ. ಧರ್ಮ ಗ್ಲಾನಿಯಾದಾಗ, ದುಷ್ಟಶಕ್ತಿಯ ವ್ಯಾಪ್ತಿಯು ಹೆಚ್ಚಾದಾಗ ಪರಮಾತ್ಮನೇ ಹಲವಾರು ರೂಪಗಳಲ್ಲಿ ಅವತಾರ ಮಾಡಿ ಆಸುರೀ ಸಂಪತ್ತನ್ನು ಹತ್ತಿಕ್ಕಿ, ದೈವೀಸಂಪತ್ತನ್ನು ನೆಲೆಗೊಳಿಸಿ, ಧರ್ಮ ಸಂಸ್ಥಾಪನೆ ಮಾಡಿ ಜಗತ್ತನ್ನು ರಕ್ಷಣೆ ಮಾಡಿರತಕ್ಕ ವಿಷಯ ಪರಮಾತ್ಮನ ವಾಕ್ಯದಿಂದಲೇ ವ್ಯಕ್ತವಾಗುತ್ತದೆ.
"ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥"
ಮಹಾತ್ಮಾಗಾಂಧಿಯವರು ಅವತಾರ ಮಾಡಿದರು. ತಮ್ಮ ಶ್ರೇಷ್ಠತಮ ಆಚರಣೆಗಳಿಂದ. ಅಮರ ಸಂದೇಶದಿಂದ ಭರತ ವರ್ಷದ ಜನತೆಯಲ್ಲಿ ಜಾಗೃತಿಯನ್ನುಂಟು ಮಾಡಿ ಭಾರತಮಾತೆಯ ಬಂಧ ವಿಮೋಚನ ಮಾಡಿ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಸತ್ಯ, ಅಹಿಂಸೆಗಳಿಂದಲೇ ವಿಶ್ವದ ಕಲ್ಯಾಣವೆಂದು ಸಾರಿದರು. ಈ ತತ್ತ್ವಗಳ ಉಪಾಸನೆಯಲ್ಲಿಯೇ ಶಾಂತಿಯನ್ನು ಕಂಡರು. ಆದರೆ ಎಲ್ಲರೂ ದೈವೀಮಾನವರ ಅಂತಸ್ತನ್ನು ಮುಟ್ಟಲಾಗುವುದಿಲ್ಲ.

ಸುಸಂಸ್ಕೃತ ಜನಾಂಗವೇ ವಿಶ್ವಶಾಂತಿಯನ್ನು ನೆಲೆಗೊಳಿಸಬಲ್ಲುದು. ಹಿಂದೆಯೇ ಹೇಳಿರುವಂತೆ ಬರಿಯ ಬಾಹ್ಯಜೀವನದ ಸೊಬಗು ಸೌಂದರ್ಯಗಳಿಂದಲೇ, ಗಳಿಕೆ ಬಳಕೆಗಳಿಂದಲೇ ಮನುಷ್ಯನು ಸಂಸ್ಕೃತನಾಗಲಾರನು. ಅಂತರ್ಜೀವನದ ಸೊಬಗು ಸೌಂದರ್ಯಗಳೂ ಬೆಳೆಯಬೇಕು. ಇದುವೆ ನೈಜ ಸಂಸ್ಕೃತಿಯ ಲಕ್ಷಣ. ಸುಸಂಸ್ಕೃತನು ಸ್ವಾರ್ಥರಹಿತನು. ಸ್ವಾರ್ಥವೇ ಸಕಲ ಅನರ್ಥಗಳ ಮೂಲ. ತನ್ನಂತೆ ಪರರ ಬಗೆವುದೇ ಸುಸಂಸ್ಕೃತನ ಸ್ವಭಾವ. ಮಾನವೀಬಾಂಧವರೆಲ್ಲರೂ ಪರಮಾತ್ಮನ ಮಕ್ಕಳು. ಅವರ ಕಲ್ಯಾಣಕ್ಕಾಗಿ ದುಡಿಯುವುದರಿಂದ ಪರಮಾತ್ಮನ ಕೃಪೆಯು ದೊರಕುವುದೆಂದು ಅವನ ನಂಬಿಕೆ. ಎಲ್ಲರಲ್ಲಿಯೂ ಆತ್ಮೀಯ ಭಾವನೆಯಿಂದ ಅವನ ಜೀವನವು ಸಾಗುವುದು. ಎಲ್ಲ ಜೀವಾತ್ಮರಲ್ಲಿಯೂ ವಿಶ್ವಾತ್ಮನನ್ನು ಕಾಣುವ ಆತನಿಗೆ ಸರ್ವರೂ ಸುಖ ಶಾಂತಿಗಳಿಂದ ಬಾಳಿ ಬದುಕಬೇಕೆಂಬುದೇ ಹೆಬ್ಬಯಕೆ. ಮತ್ತೊಬ್ಬರ ಕಷ್ಟವನ್ನು ನೋಡಿ ಮರುಗಿ ಅವರ ಕಷ್ಟವನ್ನು ಪರಿಹರಿಸಲು ಪ್ರಯತ್ನ ಮಾಡುವುದೇ ಅವನ ಸ್ವಭಾವ. ಇದುವೇ ಸನಾತನ ಧರ್ಮದ ಸಂದೇಶ.
"ಏತಾವಾನವ್ಯಯಿಧರ್ಮಃ । ಸದ್ಭಿರ್ನಿತ್ಯ ಮನುಷ್ಠಿತಃ॥ ಯಲ್ಲೋಕ ಶೋಕಹರ್ಷಾಭ್ಯಾಂ । ಆತ್ಮಾಶೋಚತಿ ಹೃಷ್ಯತಿ॥" ಧರ್ಮದ ಸಾರಸರ್ವಸ್ವವೂ ಈ ಶ್ಲೋಕದಿಂದ ಸಾರಲ್ಪಟ್ಟಿದೆ. ಇನ್ನು ಕೆಲವು ಸಂತರ ನುಡಿಗಳು ವಿಶ್ವ ಪ್ರೇಮವನ್ನು ಪ್ರತಿಪಾದಿಸುತ್ತವೆ.

"What right have I for these joys when all around me is nothing but misery and struggle for a mouldy bit of bread? I do not want happiness even as a gift, if I do not have peace of mind about each of my blood brothers, bone of my bone and flesh of my flesh."

ಹಿಂದೂ ಧರ್ಮವು ವಿಶಾಲಭಾವನೆಯುಳ್ಳುದು. ನಮ್ಮ ಸಂಸ್ಕೃತಿಯು ಸಕಲರಿಗೂ ಸ್ವಾಗತವನ್ನು ನೀಡುವ ಸಂಸ್ಕೃತಿಯು. ಯಾರನ್ನೂ ದ್ವೇಷಿಸುವುದಿಲ್ಲ. ಅಂತೆಯೇ ಪ್ರಾಚೀನ ಕಾಲದಿಂದಲೂ ವಿವಿಧ ಧರ್ಮೀಯರಿಗೆ ಆಶ್ರಯ ನೀಡಿ, ತನ್ನವರಂತೆ ಅವರನ್ನು ರಕ್ಷಣೆ ಮಾಡಿ ಪೋಷಿಸಿತು. "Religious tolerrance is the watchword of Hinduism" ಧರ್ಮ ಸಂದೇಶವನ್ನು ಅರಿತು ಜೀವನವನ್ನು ರೂಪಿಸುವುದೇ ಸಂಸ್ಕೃತಿಯು.







ಸಂಸ್ಕೃತನಾದವನು ಮಾನವಸಾಮಾನ್ಯದ ಸುಖವನ್ನೇ ಬಯಸುತ್ತಿರುವನಾದ್ದರಿಂದ ಅಶಾಂತಿ ಮೂಲವಾದ ಅನ್ಯಾಯ, ಅಹಿಂಸೆ, ತುಳಿತ, ತಾರತಮ್ಯಗಳೆಲ್ಲವೂ ಮಾಯವಾಗಿ, ಸ್ವಾತಂತ್ರ್ಯ, ಸಮತೆ, ಸೌಹಾರ್ದ ತತ್ತ್ವಗಳ ಮೇಲೆ ಸುಂದರ ಸಮಾಜವನ್ನು ನಿರ್ಮಿಸುವುದೇ ಅವನ ಮುಖ್ಯ ಗುರಿಯಾಗುವುದು.

ಅಂತೆಯೇ ಪರರಿಗಾಗಿ ಜೀವಿಸುವ, ಅವರ ಮೇಲ್ಮೆಗಾಗಿ ಬಾಳನ್ನು ಸವೆಸುವ ಸುಸಂಸ್ಕೃತರೇ, ಪುಣ್ಯಶಾಲಿಗಳೇ, ಸಚ್ಚರಿತರೇ ವಿಶ್ವಶಾಂತಿಯನ್ನು ಸ್ಥಾಪಿಸಬಲ್ಲರು.

ವಿದ್ಯಾರ್ಥಿ ಜೀವನವನ್ನು ಮುಗಿಸಿ, ಮನೆಗೆ ಹಿಂತಿರುಗುತ್ತಿರುವ ಸಾಧಕನೊಬ್ಬನಿಗೆ ತೈತ್ತಿರೀಯೋಪನಿಷತ್ತಿನಲ್ಲಿ ಕೊಟ್ಟಿರುವ ಅಮರ ಸಂದೇಶವು ನಮ್ಮ ಸಂಸ್ಕೃತಿಯ ಸಮಗ್ರ ಚಿತ್ರವೊಂದನ್ನು ಕೊಡುತ್ತದೆ.

**"ವೇದಮನೂಚ್ಯಾಚಾರ್ಯೋsನ್ತೇವಾಸಿನಮನುಶಾಸ್ತಿ.**
**ಸತ್ಯಂ ವದ, ಧರ್ಮಂ ಚರ. ಸ್ವಾಧ್ಯಾಯಾನ್ಮಾಪ್ರಮದಃ.**
**ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ**
**ಮಾ ವ್ಯವಚ್ಛೇತ್ಸೀಃ ಸತ್ಯಾನ್ನಪ್ರಮದಿತವ್ಯಂ.**
**ಧರ್ಮಾನ್ನಪ್ರಮದಿತವ್ಯಂ. ಕುಶಲಾನ್ನಪ್ರಮದಿತವ್ಯಂ.**
**ಭೂತ್ಯೈ ನ ಪ್ರಮದಿತವ್ಯಂ. ಸ್ವಾಧ್ಯಾಯ ಪ್ರವಚನಾಭ್ಯಾಂ**
**ನ ಪ್ರಮದಿತವ್ಯಂ."**

**"ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ.**
**ಮಾತೃದೇವೋ ಭವ. ಪಿತೃದೇವೋ ಭವ.**
**ಆಚಾರ್ಯದೇವೋ ಭವ. ಅತಿಥಿದೇವೋ ಭವ.**
**ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತ ವ್ಯಾನಿ.**
**ನೋ ಇತರಾಣಿ. ಯಾನ್ಯಸ್ಮಾಕಗ್ಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ."**

ಭಾರತೀಯರಾದ ನಾವುಗಳೆಲ್ಲರೂ, ಹಿರಿಯರ ಅಮರ ವಾಣಿಗಳನ್ನು ಅಮರ ಸಂದೇಶಗಳನ್ನು ಅರಿತು ಸತ್ತ್ವಸಾಧಕರಾಗಿ ಸುಸಂಸ್ಕೃತರಾಗಬೇಕಾಗಿದೆ. ಪವಿತ್ರ ಜನಾಂಗವನ್ನು ನಿರ್ಮಾಣ ಮಾಡಿ ನಮ್ಮ ಸಂಸ್ಕೃತಿಯ ಅಚ್ಚಳಿಯದ ಕೀರ್ತಿಪಾತಕೆಯನ್ನು ಬೆಳಗಿ ಜಗತ್ತೆಲ್ಲವೂ ಆಶಾಭರಿತವಾಗಿ ನೋಡತಕ್ಕ ವಿಶ್ವಶಾಂತಿ ಸ್ಥಾಪನೆಯ ಮಹತ್ಕಾರ್ಯವನ್ನು ಸಾಧಿಸಬೇಕಾಗಿದೆ. ಗುರು ಅರವಿಂದರು ಹೇಳತಕ್ಕ ರೀತಿಯ ವಿಶ್ವೈಕ್ಯತೆಯನ್ನು ಸಾಧಿಸಬೇಕಾಗಿದೆ –

"Unity for the human race by an inner oneness and not merely by an external association of interests, the resurgence of man out of the merely animal and economic life or the merely intellectual and aesthetic into the glories of the spiritual existence; the pouring of the power of the spirit into the physical mould and mental instrument so that man may develop his manhood into that supermanhood which shall exceed our present state as much as this exceeds animal state from which science tells us we have issued. Man's unity and man's self-transcendence can come only by living in Spirit.

**ಅಸತೋ ಮಾ ಸದ್ಗಮಯ**
**ತಮಸೋ ಮಾ ಜ್ಯೋತಿರ್ಗಮಯ**
**ಮೃತ್ಯೋರ್ಮಾ ಅಮೃತಂಗಮಯ.**

(ಸಮರ್ಪಣೆ : ರಜತೋತ್ಸವ ಸಂಪುಟ, ೧೯೭೧)

## ಶ್ರೀವಾಣಿ

ಅನ್ನ, ಅರಿವು, ಅನುಭಾವಳಿದತತ್ತವಾದ ಯುದ್ಧ, ಜೀವನಕಲೆಯನ್ನು ಕಟ್ಟಿಕೊಡುವ ಯುದ್ಧ, ಪರಿಪೂರ್ಣತೆಯ ಕಡೆಗೆ ನಡೆವ ಯುದ್ಧ. ಇರುವೆ ರುದ್ರನಾಗುವ, ಬೀಜ ವೃಕ್ಷವಾಗುವ, ಮರ್ಕಟ ಮಾನವನಾಗುವ, ಶಿಲೆ ಶಿಲ್ಪವಾಗುವ, ಶಬ್ದ ಶಿವನಾಗುವ ಯುದ್ಧ, ಲೋಕದಲ್ಲಿ ಸಹಾ ನಡೆಯಬೇಕಾದ ಶಾಂತಿ ಜಡದಲ್ಲಿ ಜಂಗಮನನ್ನು ಕಾಣುವ, ಮಣ್ಣು ಮಾನವ ಮೃಢನಾಗುವ ಯುದ್ಧ.

* * *

ಮನುಷ್ಯ ಅನೇಕ ರೀತಿ ಪಾಪ ಮಾಡುತ್ತಾನೆ. ಅದರಲ್ಲಿ ಅತ್ಯಂತ ಉಗ್ರ ಭೀಕರವಾದುದು ನಿಂದೆ, ಪರನಿಂದೆ. ಇಂದಿನ ವಾತಾವರಣದಲ್ಲಿ ಪ್ರತಿಯೊಬ್ಬರೂ ಪರನಿಂದಾ ಪ್ರವೀಣರು. ಮತ್ತೊಬ್ಬನ ನಿಂದೆ ಮಾಡಿ, ತೇಜೋವಧೆ ಮಾಡಿ, ಅವಹೇಳನ ಮಾಡಿ, ತಿರಸ್ಕಾರ ಮಾಡುವುದು ಸ್ವಭಾವ. ಪರರನ್ನು ನಿಂದಿಸುವುದಕ್ಕಿಂತ ನೀಚ ಕೆಲಸ ಇನ್ನೊಂದಿಲ್ಲ.

ನುಡಿನಮನ

# ಸಿದ್ಧಗಂಗೆಯ ಹೊಂಬೆಳಗು

– ಕೆ. ಓಂಕಾರಪ್ಪ



ಈಗ ಸಿದ್ಧಗಂಗಾ ಪೀಠವನ್ನಲಂಕರಿಸಿದ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಲಿಂ. ಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರ ಕರಕಮಲ ಸಂಜಾತರಾಗಿ ಅವರ ತ್ರಿವಿಧ ದಾಸೋಹಗಳ ಕಾರ್ಯದ ಕುಲುಮೆಯಲ್ಲಿ ಶುದ್ಧ ಸಿದ್ಧರಾಗಿ ಬಂದವರು. ಮಹಾಗುರುವಿನಂತೆ ನಿಜನಿಷ್ಠರು. ಇದು ಯೋಗಾಯೋಗ. 'ಎತ್ತಣ ಮಾಮರ ಎತ್ತಣ ಕೋಗಿಲೆ' ಪ್ರಭುವಿನ ಮಾತಿನಂತೆ.

ಗುರು-ಶಿಷ್ಯ ಸಂಬಂಧ ಅವಿನಾಭಾವ. ಈ ಸಂಬಂಧಕ್ಕೆ ಉಭಯರೂ ಕಾರಣರಾಗುತ್ತಾರೆ. ಅಂಥ ಮಹಾಗುರುವಿನ ಪರಮಸನ್ನಿಧಿಯ ಆಶಯದಂತೆ ಎಲ್ಲ ಯೋಜನೆಗಳನ್ನೂ ಸಂಯಮದಿಂದ ನಿರ್ವಹಿಸಿ ಗುರುಗಳ ಕೃಪೆಗೆ ಪಾತ್ರರಾಗಿರುತ್ತಾರೆ. ಅಂಥ ಉದಾತ್ತ ನಿಲವು ಅವರಿಗಿತ್ತು. ತಮ್ಮ ಅರ್ಪಣಾ ಮನೋಭಾವದಿಂದ ಪೀಠಕ್ಕೆ ಬಂದವರು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು. ಇದು ಪೀಠದ ಸೌಭಾಗ್ಯ. ಅಕ್ಷರ, ಅನ್ನ, ಜ್ಞಾನ ಈ ತ್ರಿವಿಧ ದಾಸೋಹಗಳ 'ಸಿದ್ಧ'ಗಂಗೆಯೇ ಆಗಿದ್ದ ಸಿದ್ಧಗಂಗಾಕ್ಷೇತ್ರಕ್ಕೆ ಏಳುನೂರು ವರ್ಷಗಳ ಭವ್ಯ ಇತಿಹಾಸವಿದೆ. ಪೂಜ್ಯ ಶ್ರೀ ಗೋಸಲ ಸಿದ್ಧೇಶ್ವರರಿಂದ ಪ್ರತಿಷ್ಠಾಪನೆಗೊಂಡ ಸಿದ್ಧಗಂಗಾ ಕ್ಷೇತ್ರದಲ್ಲಿ ದಾಸೋಹದ ಅಡುಗೆಮನೆಯ ಒಲೆ ಆರದಂತೆ ಪ್ರಜ್ವಲಿಸುವಲ್ಲಿ ಪೂಜ್ಯ ಶ್ರೀ ಅಟವೀ ಸ್ವಾಮಿಗಳು ಕಾರಣರು. ಪೂಜ್ಯ ಉದ್ದಾನ ಸ್ವಾಮಿಗಳಿಂದ ದೀಕ್ಷೆ ಪಡೆದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಶ್ರೀಕ್ಷೇತ್ರವನ್ನು ಬಸವಣ್ಣನವರ ಕಾಯಕದಾಸೋಹ ಸಿದ್ಧಗೊಳಿಸಿದ್ದಾರೆ. ತಮ್ಮ ಅದ್ಭುತ ಕರ್ತೃತ್ವಶಕ್ತಿಯಿಂದ, ನಿರಂತರ ಸೇವಾಮನೋಭಾವದಿಂದ ಮಹಾಮನೆಯಂತೆ ಜನಮಾನಸದಲ್ಲಿ ಪ್ರತಿಷ್ಠಾಪನೆಗೊಂಡಿದ್ದಾರೆ. ಶ್ರೀಕ್ಷೇತ್ರದಲ್ಲಿ ಪ್ರತಿದಿನ ಜಾತ್ಯಾತೀತವಾಗಿ ನಡೆದಾಡುವ ದೇವರೆಂದೇ ಸೇವಿಸುತ್ತಾರೆ. ಎಷ್ಟುಜನ ಭಕ್ತರು ಆಗಮಿಸುತ್ತಾರೆ. ಶಿಕ್ಷಣ, ವಸತಿ ಸೌಲಭ್ಯ ಈ ದೃಷ್ಟಿ ಎಷ್ಟುಮಂದಿ ವಿದ್ಯಾರ್ಥಿಗಳು ಪ್ರಸಾದ ಜನಸಮೂಹವನ್ನು ತಿದ್ದುವಲ್ಲಿ ಕ್ಷೇತ್ರ ವಹಿಸುವ ಮಹತ್ವದ ಪಾತ್ರ ಅಗಣಿತ. ಒಂದು ಕಡೆ, ಮತ್ತೊಂದು ಕಡೆ

ಈ ಎಲ್ಲಾ ಮಣಿಹವನ್ನು ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಸಂಯಮ, ಸಮಾಧಾನ ಸಮಭಾವದಿಂದ ನಿರ್ವಹಿಸುತ್ತಾರೆ. ಇದಕ್ಕೆ ಯಾರೂ ಆತಂಕ ಪಡಬೇಕಾಗಿಲ್ಲ. ಅವರು ಆಪತ್ಕಾಲದಲ್ಲಿ ಮೂಡಿಬಂದ ಹೊಂಬೆಳಗು. ಅವರ ಸರಳ, ಸಮಯ ನಿಷ್ಠ ಸಮತಾಭಾವ ಅಂಥಹುದು. ಪೂಜ್ಯರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

## ಶ್ರೀವಾಣಿ

ಐವತ್ತು ವರುಷಗಳ ಹಿಂದೆ ಗ್ರಾಮಜೀವನ ಆನಂದದಾಯಕವಾಗಿತ್ತು. ಹಳ್ಳಿಗಳು ಮಾನವೀಯತೆಯ ಮಂಗಳ ಘಟಕವಾಗಿದ್ದವು. ಆದರೆ ಇಂದು ಎಲ್ಲ ಮಾಯವಾಗಿದೆ. ರಾಜಕಾರಣಿಗಳು ಎಲ್ಲವನ್ನು ತಮ್ಮ ಕಬಂಧ ಬಾಹುಗಳಿಂದ ತಬ್ಬಿಹಿಡಿದಿದ್ದಾರೆ. ರಾಷ್ಟ್ರಜೀವನವೇ ಹದಗೆಟ್ಟು ಹೋಗಿದೆ. ಯುವಜನಾಂಗ ದಿಕ್ಕು ದೆಶೆ ಕಾಣದೆ ತೊಳಲುತ್ತಿದ್ದಾರೆ.

* * *

ದಿನವಹಿ ಹುಟ್ಟು ಸಾವನ್ನು ಮನುಷ್ಯ ಕಾಣುತ್ತಲೇ ಇರುತ್ತಾನೆ. ಪ್ರಾಣ ಗೌಣ ಎಂಬುದನ್ನು ಮನಗಂಡಿದ್ದಾನೆ. ಇಷ್ಟಾದರೂ ಮನುಷ್ಯ ಆಶೆ ಪಡುತ್ತಾನೆ. ತಾನು ಶಾಶ್ವತ ಎಂಬ ಭ್ರಮೆಯಲ್ಲಿ ಸಾವನ್ನು ಮರೆತು ವ್ಯವಹರಿಸುತ್ತಾನೆ. ತಾನು ಹೆಂಡತಿ, ಮಕ್ಕಳು, ಆಸ್ತಿ, ಹಣ, ಅಧಿಕಾರ, ಸ್ಥಾನಮಾನ ಶಾಶ್ವತ ಎಂಬ ನಂಬಿ ನಡೆಯುತ್ತಾನೆ. ಇದೇ ಪ್ರಪಂಚದಲ್ಲಿ ಅತ್ಯಂತ ವಿಚಿತ್ರವಾದುದು.



ಪ್ರಾತಃಸ್ಮರಣೀಯರು

## ಕನ್ನಡ-ಸಂಸ್ಕೃತ ವಿಶಾರದ, ಆಸ್ಥಾನ ಮಹಾವಿದ್ವಾನ್

# ಲಿಂ. ಪಿ.ಆರ್. ಕರಿಬಸವ ಶಾಸ್ತ್ರಿಗಳು

– ಎಚ್.ಎಸ್. ಸಿದ್ಧಗಂಗಪ್ಪ *

ಮೈಸೂರು ಅರಮನೆಯಿಂದ 'ಆಸ್ಥಾನ ಮಹಾವಿದ್ವಾನ್' ಗೌರವ ಪಡೆದ ವೀರಶೈವರಲ್ಲಿ ಮೊದಲಿಗರು ಎಂಬ ಗೌರವಕ್ಕೆ ಹಾಗೂ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ 'ಕರ್ನಾಟಕ ಭಾಷಾಕರಂ' ಎಂಬ ಪ್ರಶಸ್ತಿಯನ್ನು ಪಡೆದ ಹೆಗ್ಗಳಿಕೆಗೆ ಭಾಜನರಾದವರು ಉಭಯ ಭಾಷಾ ವಿಶಾರದ ಪಿ.ಆರ್. ಕರಿಬಸವ ಶಾಸ್ತ್ರಿಗಳು ಎಂದು ಹೇಳುವಲ್ಲಿ ಅಭಿಮಾನವೆನಿಸುತ್ತದೆ.

ವೀರಶೈವ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಸಂವರ್ಧನೆಗಾಗಿ ತಮ್ಮ ಜೀವನವನ್ನೇ ಅರ್ಪಿಸಿಕೊಂಡವರಲ್ಲಿ ಪಿ.ಆರ್. ಕರಿಬಸವ ಶಾಸ್ತ್ರಿಗಳು ಅಗ್ರಗಣ್ಯರಾಗಿದ್ದರು. ವೀರಶೈವ ಸಮಾಜದ ಸಂಘಟನೆಗಾಗಿ, ಸಮಾಜಕ್ಕೆ ಆದ ಅನ್ಯಾಯಗಳ ವಿರುದ್ಧ ಪ್ರತಿಭಟಿಸುವಲ್ಲಿ ಮುಂಚೂಣಿಯಲ್ಲಿದ್ದು ನ್ಯಾಯ ಒದಗುವಂತೆ ಮಾಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದರು. ಅಧ್ಯಾಪಕರಾಗಿ, ಪತ್ರಕರ್ತರಾಗಿಯೂ ಸೇವೆ ಸಲ್ಲಿಸಿದ್ದರು. ಕನ್ನಡ ಮತ್ತು ಸಂಸ್ಕೃತದಲ್ಲಿ ಅನೇಕ ಮೌಲಿಕ ಗ್ರಂಥಗಳನ್ನು ಪ್ರಕಟಿಸುವುದರ ಮೂಲಕ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಅಲ್ಲದೆ ಪ್ರಾಚೀನ ಕೃತಿಗಳನ್ನು ಸಂಪಾದಿಸಿದ್ದಾರೆ, ಪರಿಷ್ಕರಿಸಿದ್ದಾರೆ, ಟೀಕೆ ಟಿಪ್ಪಣಿಗಳನ್ನು ಬರೆದಿದ್ದಾರೆ. ಅಧ್ಯಾಪಕರಾಗಿ, ಪತ್ರಕರ್ತರಾಗಿ ಸಲ್ಲಿಸಿದ ಸೇವೆ ಅಮೂಲ್ಯವಾದುದು.

ಪಿ.ಆರ್. ಕರಿಬಸವ ಶಾಸ್ತ್ರಿಗಳು ೧೮೪೮ ರಲ್ಲಿ ಜನಿಸಿದರು. ಹಡೆದ ಪುಣ್ಯಜೀವಿಗಳು ಶರಣ ದಂಪತಿಗಳಾದ ಮೈಸೂರಿನ ಪ್ರಸಿದ್ಧ ಆಯುರ್ವೇದ ಪಂಡಿತರಾಗಿದ್ದ ರುದ್ರಪ್ಪ ಶಾಸ್ತ್ರಿಗಳು, ತಾಯಿ ಶ್ರೀಮತಿ ನಂಜಮ್ಮನವರು. ತುಂಬು ಕುಟುಂಬ. ನಾಲ್ಕು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಕರಿಬಸವ ಶಾಸ್ತ್ರಿಗಳು ಗಂಡು ಮಕ್ಕಳಲ್ಲಿ ಮೊದಲನೆಯವರು.

**ಶಿಕ್ಷಣ :** ಪ್ರಾಥಮಿಕ ಶಿಕ್ಷಣವನ್ನು ಮೈಸೂರಿನಲ್ಲಿಯೇ ಪಡೆದ ನಂತರ ಸಂಸ್ಕೃತ, ಕನ್ನಡ ವ್ಯಾಸಂಗ ಮಾಡಿದರು. ಇವರಿಗೆ ಆಗಿನ ಕಾಲದಲ್ಲಿ ಪ್ರಸಿದ್ಧ ಶಿಕ್ಷಕರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದ ಮೈಸೂರಿನ ಬೆಟ್ಟದಪುರದ ಬಸವಲಿಂಗದೇವರು, ಬಾಚಹಳ್ಳಿ ಶ್ರೀಕಂಠ ಶಾಸ್ತ್ರಿಗಳಲ್ಲಿ ಸಂಸ್ಕೃತ ನಾಟಕ, ಕಾವ್ಯಗಳನ್ನು ಅಧ್ಯಯನ ಮಾಡಿದರು. ತಾವೇ ಸ್ವಂತವಾಗಿ ವೇದಾಂತ, ವೀರಶೈವ ಸಿದ್ಧಾಂತಗಳನ್ನು ಕರಗತ ಮಾಡಿಕೊಂಡರು. ಅಭಿನವ ಕಾಳಿದಾಸ ಎಂಬ ಕೀರ್ತಿಗೆ ಭಾಜನರಾಗಿದ್ದ ಬಸಪ್ಪ ಶಾಸ್ತ್ರಿಗಳಿಂದಲೂ ಶಿಕ್ಷಣ ಪಡೆದರೆಂಬ ಪ್ರತೀತಿ ಇದೆ. ಬಾಲ್ಯದಲ್ಲಿಯೇ ಅಪಾರ ಪಾಂಡಿತ್ಯವನ್ನು ಗಳಿಸಿದ ಪ್ರತಿಭಾವಂತರು.

**ವೃತ್ತಿ ಜೀವನ :** ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರೈಸ್ತ ಧರ್ಮ ಪ್ರಚಾರಕ್ಕಾಗಿ ಭಾರತಕ್ಕೆ ಬಂದ ವಿದೇಶಿ ವಿದ್ವಾಂಸರು ದೇಶಿಯ ಭಾಷೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದರು. ಕರ್ನಾಟಕಕ್ಕೆ ಆಗಮಿಸಿದ ಕ್ರೈಸ್ತ ಪಾದ್ರಿಗಳು ಮೈಸೂರಿನಲ್ಲಿ ವೆಸ್ಲಿಯನ್ ಮಿಷನ್ ಹೈಸ್ಕೂಲ್‌ನ್ನು ಪ್ರಾರಂಭಿಸಿದರು. ಆ ಸಂಸ್ಥೆಯವರು ಕರಿಬಸವ ಶಾಸ್ತ್ರಿಗಳನ್ನು ಪ್ರಪ್ರಥಮ ಕನ್ನಡ ಪಂಡಿತರನ್ನಾಗಿ ನೇಮಿಸಿಕೊಂಡರು. ಸುಮಾರು ಹದಿನೈದು ವರ್ಷಗಳ ಕಾಲ ಭಾಷೋಜ್ಜೀವಿನಿ ಸಭೆಯ ಮುಖ್ಯೋಪಾಧ್ಯರಾಗಿಯೂ ಸೇವೆ ಸಲ್ಲಿಸಿದರು.

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಆಗ ಮೈಸೂರಿನ ಮಹಾರಾಜರಾಗಿದ್ದರು. ಅವರು ೧೮೩೩ ರಲ್ಲಿ ಪ್ರಾರಂಭವಾಗಿದ್ದ 'ರಾಜಸ್ಕೂಲ್'ನ್ನು ಮಹಾರಾಜರ ಆಸಕ್ತಿಯಿಂದ ಮಹಾರಾಜ ಕಾಲೇಜಾಗಿ ರೂಪುಗೊಂಡಿತು. ಈ ಕಾಲೇಜಿಗೆ ಪಿ.ಆರ್. ಕರಿಬಸವ ಶಾಸ್ತ್ರಿಗಳು ಸೀನಿಯರ್ ಕನ್ನಡ ಪಂಡಿತರಾಗಿ ನೇಮಕಗೊಂಡರು. ಸುಮಾರು ೨೭ ವರ್ಷಗಳ ಕಾಲ ಅಸಂಖ್ಯಾತ ವಿದ್ಯಾರ್ಥಿಗಳಿಗೆ ದಾನ ಮಾಡಿದ ಹೆಗ್ಗಳಿಕೆ. ಶಾಸ್ತ್ರಿಗಳ ಈ ಸುದೀರ್ಘ ಸೇವೆಯನ್ನು ಮನಗೊಂಡು ಮಹಾರಾಜರು ಕಾಲೇಜಿನ ಕರ್ನಾಟಕ ಸಂಘದ ವತಿಯಿಂದ ಮಾರ್ಚ್ ೪, ೧೯೨೯ ರಲ್ಲಿ ಭಕ್ತಿಪೂರ್ವಕವಾಗಿ ಸನ್ಮಾನ ಮಾಡಿ ಅಭಿನಂದನಾ ಪತ್ರವನ್ನು ನೀಡಿ ಧನ್ಯತೆಯನ್ನು ಪಡೆದರು.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ಕರಿಬಸವ ಶಾಸ್ತ್ರಿಗಳ ಸೇವೆ ಕೇವಲ ಅಧ್ಯಾಪಕರ ವೃತ್ತಿಗೇ ಸೀಮಿತಗೊಂಡಿರಲಿಲ್ಲ. ಬಿಡುವಿನ ವೇಳೆಯನ್ನು ಸಾಮಾಜಿಕ, ಸಾರ್ವಜನಿಕ, ಸಾಂಸ್ಕೃತಿಕ ಕಾರ್ಯಗಳಲ್ಲಿಯೂ ತೊಡಗಿಸಿಕೊಂಡಿದ್ದರು. ಮೈಸೂರಿನ ಭಾಷೋಜ್ಜೀವಿನಿ ಸಂಸ್ಕೃತ ಪಾಠಶಾಲೆ ಸಂಸ್ಥಾಪಕರಲ್ಲಿ ಒಬ್ಬರಾಗಿದ್ದರು. ಮುಡುಕುತೊರೆಯಲ್ಲಿ ವೀರಶೈವ ಮತ ಸಂವರ್ಧಿನಿ ಸಭೆಯನ್ನು ಸ್ಥಾಪಿಸಿ ಜೀವಿತಾವಧಿಯವರೆಗೂ ಅದರ ಅಧ್ಯಕ್ಷರಾಗಿ ಅಮೂಲ್ಯ ಸೇವೆ ಸಲ್ಲಿಸಿದರು. ವೀರಶೈವ ಧರ್ಮ ಹಾಗೂ ಸಾಹಿತ್ಯ ಪ್ರಚಾರಕ್ಕಾಗಿ 'ಶಂಕರ ವಿಲಾಸ' ಎಂಬ ಮುದ್ರಣಾಲಯವನ್ನು ಆರಂಭಿಸಿದರು.

ಕರಿಬಸವ ಶಾಸ್ತ್ರಿಗಳು ಶುದ್ಧ ವೈದಿಕರಾಗಿದ್ದರೂ, ಅವರ ಲೌಕಿಕ ಪ್ರಜ್ಞೆ ಅಸಾಧಾರಣವಾಗಿತ್ತು. ಯಜಮಾನ್ ವೀರಸಂಗಪ್ಪನವರು ಆರಂಭಿಸಿದ ಮೈಸೂರು ಸ್ಟಾರ್ ಪತ್ರಿಕೆ ವೀರಶೈವ ಸಮಾಜದ ಅಭಿವೃದ್ಧಿಗೆ ಮಹೋನ್ನತ ಸೇವೆಯನ್ನು ಸಲ್ಲಿಸಿರುವುದನ್ನು ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಲ್ಲಿ ದಾಖಲಿಸುವಂತಹದು. ಈ ಪತ್ರಿಕೆಯ ಸಂಪಾದಕರು ವೀರಸಂಗಪ್ಪನವರಾದರೂ ಕರಿಬಸವ ಶಾಸ್ತ್ರಿಗಳು ಈ ಪತ್ರಿಕೆಯೊಂದಿಗೆ ಅವಿನಾಭಾವ ಸಂಬಂಧವನ್ನಿಟ್ಟುಕೊಂಡಿದ್ದರು. ವೀರಶೈವ ಧರ್ಮ, ಸಾಹಿತ್ಯ, ಆಚಾರ ವಿಚಾರಗಳಿಗೆ ಸಂಬಂಧಿಸಿದ ಅನೇಕ ಮೌಲಿಕ ಲೇಖನಗಳನ್ನು ಬರೆಯುವುದರ ಮೂಲಕ ಆ ಪತ್ರಿಕೆಯ ಮೌಲ್ಯವನ್ನು ಹೆಚ್ಚಿಸಿದ್ದರು. ೧೮೭೧ರ ಸೆನ್ಸಸ್ ವರದಿಯಲ್ಲಿ ವೀರಶೈವರನ್ನು ಶೂದ್ರ ವರ್ಗಕ್ಕೆ ಸೇರಿಸಲಾಗಿತ್ತು. ಈ ವರದಿಯನ್ನು ಬಲವಾಗಿ ಖಂಡಿಸಿ ವೀರಶೈವ ಧರ್ಮದ ವಿಸ್ತಾರವಾದ ಪರಿಚಯವನ್ನು ಮಾಡಿಕೊಡುವುದರ ಮೂಲಕ ಪ್ರತಿಭಟಿಸಲಾಯಿತು. ಈ ಬಗ್ಗೆ ಅನೇಕರು ಮಾಡಿದ ಪ್ರತ್ಯಾರೋಪಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಯಿತು. ಸುಮಾರು ಎರಡು ವರ್ಷಗಳ ಕಾಲ ನಡೆದ ಈ ವಾದ ವಿವಾದಗಳನ್ನೆಲ್ಲ ಕ್ರೋಡೀಕರಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸುವಲ್ಲಿ ಕರಿಬಸವ ಶಾಸ್ತ್ರಿಗಳ ಪಾತ್ರ ಮಹತ್ತರವಾದುದು.

೧೮೯೧ ರಲ್ಲಿ 'ವೀರಶೈವ ಮತ ಪ್ರಕಾಶಿಕೆ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ, ತಾವೇ ಸ್ಥಾಪಿಸಿದ 'ಶಂಕರ ವಿಲಾಸ' ಮುದ್ರಣಾಲಯದ ಮೂಲಕ ಪ್ರಕಟಿಸಲಾರಂಭಿಸಿದರು. ಕರಿಬಸವ ಶಾಸ್ತ್ರಿಗಳೇ ಈ ಪತ್ರಿಕೆಯ ಸಂಪಾದಕರಾಗಿದ್ದು, ಈ ಪತ್ರಿಕೆಯಲ್ಲಿ ಪ್ರಾಚೀನ ಕಾವ್ಯಗಳನ್ನು ಹಂತ ಹಂತವಾಗಿ ಪ್ರಕಟಿಸುತ್ತಿದ್ದಲ್ಲದೆ ವೀರಶೈವ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ವಿಷಯಗಳನ್ನು ಕುರಿತು ಲೇಖನಗಳನ್ನು ಪ್ರಕಟಿಸುತ್ತಿದ್ದರು. ಆ ಕಾಲದಲ್ಲಿ ಈ ಪತ್ರಿಕೆ ಮಾಡಿದ ಸಾಧನೆ 'ನ ಭೂತೋ ನ ಭವಿಷ್ಯತಿ' ಎನ್ನುವಂತಿತ್ತು.

ಪಿ.ಆರ್. ಕರಿಬಸವ ಶಾಸ್ತ್ರಿಗಳು ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳಲ್ಲಿ ಅಪಾರವಾದ ಪಾಂಡಿತ್ಯದ ಗಣಿಯೇ ಆಗಿದ್ದರು. ಅಲಂಕಾರ, ವ್ಯಾಕರಣ, ತರ್ಕ, ಮುಂತಾದ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು. ಷಡ್ದರ್ಶನಗಳು, ಸ್ಮೃತಿಗಳು, ಆಗಮಗಳು, ವೇದಗಳು, ಉಪನಿಷತ್ತುಗಳು, ಭಾರತ ಭಾಗವತ, ರಾಮಾಯಣ ಇವೇ ಮೊದಲಾದವಗಳ ಬಗ್ಗೆ ತಲಸ್ಪರ್ಶಿ ಅಧ್ಯಯನ ಮಾಡಿದ್ದರು. ಒಟ್ಟಿನಲ್ಲಿ ಪ್ರಾಚೀನ ಭಾರತೀಯ ಶಾಸ್ತ್ರ ಪುರಾಣಗಳ ಬಗೆಗೆ ಸ್ಪಷ್ಟವಾದ ಪರಿಕಲ್ಪನೆ ಇತ್ತು. ಇವೆಲ್ಲವುಗಳಿಂದ ಕರಿಬಸವ ಶಾಸ್ತ್ರಿಗಳು ಒಬ್ಬ ಪ್ರತಿಭಾವಂತ ಪಂಡಿತರೆಂಬ ಕೀರ್ತಿಗೆ ಭಾಜನರಾಗಿದ್ದರು.

ಕರಿಬಸವ ಶಾಸ್ತ್ರಿಗಳಲ್ಲಿರುವ ವಿದ್ವತ್ತನ್ನು ಮನಗೊಂಡ ಸೊಲ್ಲಾಪುರದ ಮಹಾದಾನಿ ವಾರದಮಲ್ಲಪ್ಪನವರು ಅವರನ್ನು ತಮ್ಮಲ್ಲಿಗೆ ಬರಮಾಡಿಕೊಂಡು, ವಿಪುಲರ್ಥ, ಶಾಲು ಜೋಡಿಯನ್ನಿತ್ತು ಸನ್ಮಾನಿಸಿದುದು, ಚಿತ್ರದುರ್ಗದ ಬೃಹನ್ಮಠದ ಜಗದ್ಗುರುಗಳು ಪೂಜ್ಯ ಶ್ರೀ ಶ್ರೀ ಜಯದೇವ ಸ್ವಾಮಿಗಳು ಶಾಸ್ತ್ರಿಗಳನ್ನು ಮಠಕ್ಕೆ ಬರಮಾಡಿಕೊಂಡು ಅವರ ಘನತೆಗೆ ತಕ್ಕಂತೆ ಸನ್ಮಾನ ಮಾಡಿ ಆಶೀರ್ವದಿಸಿದುದು ಅವರ ಘನ ವ್ಯಕ್ತಿತ್ವಕ್ಕೆ ನೀಡಿದ ಮಹೋನ್ನತ ಗೌರವವಾಗಿದೆ.

ಕರಿಬಸವ ಶಾಸ್ತ್ರಿಗಳು ಅಧ್ಯಕ್ಷರಾಗಿದ್ದ ವೀರಶೈವ ಮತ ಸಂವರ್ಧಿನೀ ಸಭೆ ಕೈಗೊಂಡ ಮಹತ್ವದ ಕಾರ್ಯವೆಂದರೆ ಧರ್ಮಕ್ಕೆ ಸಂಬಂಧಿಸಿದ ಉಪನ್ಯಾಸಗಳನ್ನು ಏರ್ಪಡಿಸಲು ತೀರ್ಮಾನಿಸಿ ಈ ಕಾರ್ಯ ಯಶಸ್ವಿಯಾಗಿ, ಅರ್ಥಪೂರ್ಣವಾಗಿ ನಡೆಯಲು ವೇದಮೂರ್ತಿಗಳಾದ ಶಿರಸಿ ಗುರುಶಾಂತ ಶಾಸ್ತ್ರಿಗಳು, ಸಿದ್ಧಲಿಂಗ ಶಾಸ್ತ್ರಿಗಳು, ಚೆನ್ನವೀರಾರ್ಯರು, ಹುಚ್ಚಪ್ಪ ಶಾಸ್ತ್ರಿಗಳು, ಬಿ. ಮಹದೇವ ಶಾಸ್ತ್ರಿಗಳು, ಚಂದ್ರಶೇಖರ ದೇವರು ಮೊದಲಾದ ವಿದ್ವಾಂಸರನ್ನು ನಿಯೋಜಿಸಿದರು.

ಈ ಸಭೆಯ ಆಶ್ರಯದಲ್ಲಿ ವಿದ್ವಾಂಸರು ನೀಡಿದ ಉಪನ್ಯಾಸಗಳನ್ನು ಗ್ರಂಥರೂಪದಲ್ಲಿ ಒಂದೆಡೆ ದೊರೆಯುವಂತೆ ಮಾಡುವ ಉದ್ದೇಶದಿಂದ ಅವುಗಳನ್ನೆಲ್ಲ ಕ್ರೋಡೀಕರಿಸಿ ಎರಡು ಸಂಪುಟಗಳಲ್ಲಿ ಪ್ರಕಟಿಸಿ ಲೋಕಾರ್ಪಣೆ ಮಾಡುವುದರ ಮೂಲಕ ಶ್ಲಾಘನೀಯವಾದ ಕೆಲಸ ಮಾಡಿದ್ದರು. ಆ ಎರಡು ಸಂಪುಟಗಳಲ್ಲಿ ಪ್ರಕಟವಾಗಿರುವ ವಿಷಯಗಳು ಮಹತ್ವವಾದವುಗಳು. ಸಭೆಯ ಮುಖ್ಯೋದ್ದೇಶ ಮೈಸೂರಿನ ಸೆನ್ಸಸ್ ರಿಪೋರ್ಟ್ ಕನ್ನಡ



ಭಾಷಾಂತರ, ಎತ್ನಾಗ್ರಫಿ ವಿಷಯ, ಸಾಂಖ್ಯಾದಿ ಸರ್ವಮತ ಸ್ವರೂಪ-ವೀರಶೈವ ಮತದ ಕರ್ತವ್ಯಾಂಶಗಳು, ರಾಮಸಾಹೇಬ ವಾರದಮಲ್ಲಪ್ಪ, ಶಿರಸಂಗಿ ದೇಸಾಯಿ ಇವರ ಜೀವನ ಚರಿತ್ರೆ, ಸಮಾಜೋನ್ನತಿ, ವೀರಶೈವ ಮತ ಪ್ರಚಾರ, ಲಿಂಗಧಾರಣ, ವೀರಶೈವ ಮತ ವಿಷಯ, ಗುರುತ್ವಕ್ಕೆ ವಿದ್ಯಾವಶ್ಯಕತೆ, ಶಿವದೀಕ್ಷೆ ಗುರುಲಿಂಗ ವಿಷಯ, ಆಸ್ತಿಕತೆ, ಮಠಾಧಿಕಾರ, ಶಿವಭಕ್ತಿ, ಆಗಮ ಪ್ರಾಮಾಣ್ಯ, ವೀರಶೈವ ಮಠಾಭಿವೃದ್ಧಿಯ ಸಹಾಯಧನ, ಪಂಚಸೂತಕ ವಿಚಾರ, ವಿರಕ್ತಾಶ್ರಮ ಲಕ್ಷಣ, ವರ್ಣಾಶ್ರಮ ವಿಚಾರ, ವೀರಶೈವ ಮತಕ್ಕುಂಟಾದ ನ್ಯೂನ್ಯತೆಗಳು, ಕ್ರಿಯಾಜ್ಞಾನ ಸ್ವರೂಪವು, ರೇಣುಕಾಚಾರ್ಯರ ಸಂಕ್ಷಿಪ್ತ ಚರಿತ್ರೆ, ಲಿಂಗಧಾರಣೆಯ ವೇದೋಕ್ತವಾದುದು, ಪಾದೋದಕ ವಿಚಾರ, ಆಸಕ್ತ ಮತ್ತು ಭಕ್ತಿ, ರುದ್ರ ಪಶುಪತಿ ಕಥೆ, ಪ್ರೌಢ ಭಕ್ತಿಗೂ, ಮೂಢನಂಬಿಕೆಗೂ ಇರುವ ತಾರತಮ್ಯ, ಬ್ರಹ್ಮಾದ್ವೈತಕ್ಕೆ ಶಿವಾದ್ವೈತಕ್ಕೂ ಇರುವ ಭೇದ ಮೊದಲಾದ ವಿಚಾರಪೂರ್ಣ ಲೇಖನಗಳು ಈ ಎರಡು ಸಂಪುಟಗಳಲ್ಲಿ ಅಡಕವಾಗಿವೆ.

**ಶಿಷ್ಯ ವರ್ಗ :** ಕರಿಬಸವ ಶಾಸ್ತ್ರಿಗಳು ಅಪಾರವಾದ ಶಿಷ್ಯ ಬಳಗವನ್ನು ಹೊಂದಿದ್ದರು. ಅವರಿಂದ ಕಲಿತವರು ಪ್ರಸಿದ್ಧ ವಿದ್ವಾಂಸರಾಗಿದ್ದಾರೆ. ಅವರಲ್ಲಿ ಕೆಲವರನ್ನು ಹೆಸರಿಸುವುದಾದರೆ ಆಸ್ಥಾನ ವಿದ್ವಾನ್ ಪಂಡಿತರತ್ನ ಶಿರಸಿ ಗುರುಶಾಂತ ಶಾಸ್ತ್ರಿಗಳು, ಆಸ್ಥಾನ ವಿದ್ವಾನ್ ಚಂದ್ರಶೇಖರ ಶಾಸ್ತ್ರಿಗಳು, ಸಿಂಗಿರಾಜ ಪುರಾಣದ ಬಸವಲಿಂಗ ಶಾಸ್ತ್ರಿಗಳು, ತಿಪಟೂರು ವಿರೂಪಾಕ್ಷ ಶಾಸ್ತ್ರಿಗಳು, ರಾಜಕವಿಭೂಷಣ ಲಿಂಗರಾಜ ಅರಸರು, ವೀರಪ್ಪಾಜಿ ಅರಸರು, ವೀರನಗೆರೆ ಚಂದ್ರಶೇಖರ ಶಾಸ್ತ್ರಿಗಳು, ಕೆ. ವರದಾಚಾರ್ಯರು, ಪಂಡಿತ ವೀರರಾಘವಾಚಾರ್ಯರು, ಸಂಪಿಗೆ ಸಿದ್ದಲಿಂಗ ಶಾಸ್ತ್ರಿಗಳು, ಆಸ್ಥಾನ ವಿದ್ವಾನ ಪಂಡಿತರತ್ನ ಬಿ. ಶಿವಮೂರ್ತಿ ಶಾಸ್ತ್ರಿಗಳು ಮುಂತಾದವರು.

ಕರಿಬಸವ ಶಾಸ್ತ್ರಿಗಳಲ್ಲಿ ಕನ್ನಡ ಸಂಸ್ಕೃತ ಕಲಿತ ಕ್ರೈಸ್ತ ಪಾದ್ರಿಗಳಲ್ಲಿ ರೆ॥ ಗ್ರೀಮಾಡ್, ರೆ॥ ಹಾಕಿನ್, ರೆ॥ ಹೆಗ್, ರೆ॥ ಗಲಿಫರ್ಡ್, ರೆ॥ ರಿಡಿರ್ಟಾ, ರೆ॥ ಥಾಂಸನ್ ಅವರು ನಿಜಗುಣ ಶಿವಯೋಗಿಗಳ ಅನುಭವ ಸಾರವನ್ನು ವ್ಯಾಸಂಗ ಮಾಡುತ್ತಿದ್ದಾಗ ಅದರಲ್ಲಿನ ಮುದ್ರಿತ ದೋಷಗಳನ್ನು ಗಮನಿಸಿ ಆ ಕಾವ್ಯವನ್ನು ಪರಿಷ್ಕರಿಸಿ ಅದಕ್ಕೆ ಒಂದು ಟಿಪ್ಪಣಿಯನ್ನು ಬರೆದುಕೊಡುವಂತೆ ಶಾಸ್ತ್ರಿಗಳಲ್ಲಿ ಪ್ರಾರ್ಥಿಸಿಕೊಂಡರು. ಅವರು ಪರಿಷ್ಕರಿಸಿ ಬರೆದುಕೊಟ್ಟ ಮೇಲೆ ವೆಸ್ಲಿ ಮುದ್ರಣಾಲಯದಲ್ಲಿ ಅದನ್ನು ಅಚ್ಚು ಮಾಡಿಸಿದ್ದಾರೆ. ಅದನ್ನು ಶಾಸ್ತ್ರಿಗಳು ಈ ರೀತಿ ಹೇಳಿಕೊಂಡಿದ್ದಾರೆ.

**ವರಮಿತು ತಾಮ್ನನ್ನಾಮಕ**
**ನುರು ಸುಗುಣಂ ಕ್ರೈಸ್ತ ಬೋಧಕಂ ಪ್ರೇರಿಸೆ ತಾಂ**
**ಕರಿವೃಷಭಶಾಸ್ತ್ರಿ ನಲಿವಿಂ**
**ವಿರಚಿಸಿದೆಂ ಟಿಪ್ಪಣಿಯನೆ ಪೋಷಕನ್ನಡದಿಂ॥**

ಕರಿಬಸವ ಶಾಸ್ತ್ರಿಗಳು ಶಿಷ್ಯ ವಾತ್ಸಲ್ಯ ಪರಿಪೂರ್ಣರು. ತಮ್ಮಿಂದ ಕಲಿತ ಶಿಷ್ಯರು ಉನ್ನತ ಮಟ್ಟಕ್ಕೇರುತ್ತಿರುವುದನ್ನು ಕಂಡು ಸಂತೋಷಪಡುತ್ತಿದ್ದರು. ಅವರು ಮಾಡುತ್ತಿರುವ ಸಾಧನೆಯ ಬಗ್ಗೆ ಅಭಿಮಾನಪಡುತ್ತಿದ್ದರು. ಉದಾಹರಣೆಗಾಗಿ ತಮ್ಮಲ್ಲಿ ಸುಮಾರು ಆರು ವರ್ಷಗಳ ಕಾಲ ಕನ್ನಡ ಸಂಸ್ಕೃತ ವ್ಯಾಸಂಗ ಮಾಡಿದ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳ ಒಂದು ಗ್ರಂಥಕ್ಕೆ ಮೌಲಿಕವಾದ ಒಂದು ಮುನ್ನುಡಿಯನ್ನು ಬರೆದು ತಮ್ಮ ಶಿಷ್ಯ ವಾತ್ಸಲ್ಯವನ್ನು ಪ್ರಕಟಿಸಿದ್ದಾರೆ.

"ನಾಲ್ವಡಿ ಕೃಷ್ಣರಾಜೇಂದ್ರ ವಿಲಾಸವೆಂಬೀ ಗ್ರಂಥವನ್ನು ನಾನು ಆದ್ಯಂತವಾಗಿ ಓದಿ ನೋಡಿದೆನು. ಇವನ್ನು ಸರಿಪಡಿಸಿಕೊಡಬೇಕೆಂದು ಅಪೇಕ್ಷಿಸಿದ ಗ್ರಂಥಕರ್ತರ ಇಚ್ಛೆಯಂತೆ ತಿದ್ದಿಕೊಟ್ಟಿರುವೆನು. ಇದಲ್ಲದೆ ಈ ಕಾವ್ಯದ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಬರೆದಿರುವೆನು.

ಈ ಕಾವ್ಯವು ಚಂಪೂ ರೂಪವಾಗಿದೆ. ನಾಲ್ಕು ಭಾಗಗಳಾಗಿ ಭಾಗಿಸಲ್ಪಟ್ಟ ಪ್ರತಿಭಾಗಕ್ಕೂ ತರಂಗವೆಂಬ ಹೆಸರನ್ನು ಕೊಟ್ಟಿದೆ. ಪ್ರಥಮ ತರಂಗದಲ್ಲಿ ಭರತಖಂಡದ ಮತ್ತು ಕರ್ನಾಟಕದ ವರ್ಣತಿಯಿದೆ, ದ್ವಿತೀಯ ತರಂಗದಲ್ಲಿ ಯದುವಂಶದ ರಾಜರ ಚರಿತ್ರೆಯನ್ನು ಯದುಮಹಾರಾಜರಿಂದ ಹಿಡಿದು ಆಳುವ ಮಹಾಪ್ರಭುಗಳವರೆಗೆ ಸಂಗ್ರಹವಾಗಿ ನಿರೂಪಿಸಲ್ಪಟ್ಟಿದೆ. ತೃತೀಯ ತರಂಗದಲ್ಲಿ ಶ್ರೀಮದ್ಮಹಾರಾಜರವರ ಗುಣಗಳೂ, ಸದಾಚಾರ ಸನ್ಮಾರ್ಗಗಳೂ ಹೇಳಲ್ಪಟ್ಟಿವೆ. ಚತುರ್ಥಿ ತರಂಗದಲ್ಲಿ ಶ್ರೀಮಹನ್ಮರಾಜರವರ ಕಾಲದಲ್ಲಾದ ದೇಶಾಭಿವೃದ್ಧಿ ಕಾರ್ಯಗಳು ವರ್ಣಿತವಾಗಿವೆ. ಒಟ್ಟಿನಲ್ಲಿ ಇದೊಂದು ನವೀನವೂ ಅವಲೋಕನೀಯವೂ ಆದ ಖಂಡ ಕಾವ್ಯವಾಗಿದೆ.

ಈ ಕವಿಯು ಕರ್ನಾಟಕ ಸಾಹಿತ್ಯ ಪ್ರಪಂಚದಲ್ಲಿ ಹೊಸಬನಂತೆ ಕಾಣಿಸಿದರೂ ಕವಿತಾ ವೈಖರಿ ಮಾತ್ರ ಸಂಸ್ಕಾರವಾದುದೆಂದು ಕಾಣುತ್ತದೆ. ಶೈಲಿಯು ಸರಳವಾಗಿಯೂ ಗಂಭೀರವಾಗಿಯೂ ಸ್ವಭಾವಜನ್ಯವಾಗಿಯೂ ಇದೆ. ಅನೇಕ ಸಂದರ್ಭಗಳಲ್ಲಿ ರಸಭಾವಗಳು ಚೆನ್ನಾಗಿ ಪ್ರತಿಪಾದಿಸಲ್ಪಟ್ಟು ಚಿತ್ತಾಹ್ಲಾದಕವಾಗಿವೆ. ವರ್ಣನೆಯು ನವೀನವಾಗಿದೆ. ಯುಕ್ತಿಗಳು ಹೊಸ ರೀತಿಯಿಂದ ಕೂಡಿವೆ. ಉಪಮಾನಾದ್ಯಲಂಕಾರಗಳು ಮಿತವರಿತು ಬಂದಿವೆ. ಗ್ರಂಥವು ಬಹು ಗಂಭೀರವಾಗಿಯೂ ರಸವತ್ತಾಗಿಯೂ ಇದೆ.







ಈ ಗ್ರಂಥಕರ್ತೃವಾದ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳೆಂಬುವರು ನನ್ನ ವಿದ್ಯಾರ್ಥಿಗಳಲ್ಲಿ ಮುಖ್ಯರು. ಇವರು ಸರ್ಕಾರದ ಪಾಠಶಾಲೆಗಳಲ್ಲಿಯೇ ಅಲ್ಲದೆ ನನ್ನಲ್ಲಿಯೂ ಸ್ವತಂತ್ರವಾಗಿ ಕೆಲವು ವರ್ಷ ವಿದ್ಯಾಭ್ಯಾಸ ಮಾಡಿದವರು. ಇವರು ಕೆಲಕಾಲ ಉಪಾಧ್ಯಾಯ ವೃತ್ತಿಯಲ್ಲಿದ್ದು ಸುಮಾರು ಈಗ್ಗೆ ನಾಲ್ಕು ವರ್ಷಗಳ ಹಿಂದೆ ಆ ವೃತ್ತಿಯನ್ನು ತ್ಯಜಿಸಿ ಕೀರ್ತನ, ಪುರಾಣ ಶ್ರವಣ, ಭಾಷಣಾದಿಗಳ ಮೂಲಕ ಧರ್ಮ ಬೋಧನೆ ಮಾಡುತ್ತಾ ದೇಶ ಸೇವೆ ಮಾಡುತ್ತಿರುವರು. ಇವರು ಒಳ್ಳೆಯ ವಾಗ್ಮಿಗಳೂ ಲೇಖಕರೂ ಆಗಿರುವುದರಿಂದ ನಾಲ್ಕು ವರ್ಷಗಳಲ್ಲಿಯೇ ಕರ್ನಾಟಕದ ಕೀರ್ತನಕಾರರಲ್ಲಿ ಹೆಸರನ್ನು ಪಡೆದ ಗಣ್ಯರಾಗಿರುವರು. ಇದಲ್ಲದೆ ಅನೇಕ ಸಂಘಗಳಿಂದಲೂ ದೊಡ್ಡ ಮನುಷ್ಯರಿಂದಲೂ ಬಂಗಾರದ ಪದಕಗಳನ್ನು ಪಡೆದ ಲೋಕ ಪ್ರೇಮವನ್ನು ಸಂಪಾದಿಸಿರುವರು.

ಸ್ವಲ್ಪ ಕಾಲದೊಳಗಾಗಿ ಸರ್ವತೋಮುಖವಾದ ಅಭಿವೃದ್ಧಿಯನ್ನು ಪಡೆದು ನಾನಾ ಮುಖದಿಂದ ದೇಶ ಸೇವೆ ಮಾಡುತ್ತಿರುವ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಸರ್ವಜ್ಞನೂ, ಸರ್ವಶಕ್ತನು ಆದ ಪರಮೇಶ್ವರನು ಇತೋಪ್ಯತಿಶಯವಾದ ಸಾಮರ್ಥ್ಯವನ್ನು ದಯಪಾಲಿಸಿ ನಾಲ್ವಡಿ ಕೃಷ್ಣರಾಜ ವಿಲಾಸದಂತಹ ಹಲವು ಗ್ರಂಥಗಳನ್ನು ಬರೆಯುವ ಶಕ್ತಿಯನ್ನಿತ್ತು ಕಾಪಾಡಲೆಂದು ಪ್ರಾರ್ಥಿಸುತ್ತೇನೆ."

ಕರಿಬಸವ ಶಾಸ್ತ್ರಿಗಳವರ ಕೀರ್ತಿ ಅಜರಾಮರವಾಗಿ ಉಳಿದಿರುವುದು ಅವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿಸಿರುವ, ಸಂಪಾದಿಸಿರುವ, ಪರಿಷ್ಕರಿಸಿರುವ ಕೃತಿ ರಾಶಿಯಿಂದ, ನಮಗಿಂದು ಲಭ್ಯವಾಗಿರುವ ಸುಮಾರು ನಲವತ್ತೊಂದು ಕೃತಿಗಳು ಅವರ ವಿದ್ವತ್ತಿಗೆ ದ್ಯೋತಕಗಳಾಗಿವೆ. ಅವು ಯಾವುವು ಎಂದರೆ –

ಸಂಸ್ಕೃತಿ ಗ್ರಂಥಗಳು : ಕ್ರಿಯಾಸಾರ, ಸಿದ್ಧಾಂತ ಶಿಖಾಮಣಿ, ದೀಕ್ಷಾವಿಧಿ, ಮಾಚಿದೇವ ಮನೋವಿಲಾಸ, ಲಿಂಗಧಾರಣ ಚಂದ್ರಿಕೆ, ಅನುಭವ ಸುತ್ರ, ವಿವಾಹ ವಿಧಿ, ಭಕ್ತ್ಯಾಧಿಕ್ಯ ರತ್ನಾವಳಿ, ದಶಗ್ರಂಥಿ, ವ್ಯಾಸೋಕ್ತ ಬಸವಪುರಾಣ, ಶಿವಾದ್ವೈತ ಮಂಜರಿ, ವೀರಶೈವ ಪ್ರದೀಪಿಕಾ, ತ್ರಿಕಾಂಡ ಅಮರಕೋಶ ಶಬ್ದಾರೂಪಾವಳಿ, ಶಿವಪೂಜಾ ವಿಧಿ, ಸಂಕ್ಷಿಪ್ತ ಶಿವ ಪೂಜಾವಿಧಿ, ಗಣ ಸಹಸ್ರನಾಮಾವಳಿ ಸ್ತೋತ್ರ, ಕಂಚಿ ಶಂಕರಾರಾಧ್ಯ ಬಸವೇಶ ವಿಜಯಂ, ಟೀಕಾ ಭಗವದ್ಗೀತೆ, ಗೀತಾ ಪಂಚರತ್ನ, ಶ್ರೀ ರುದ್ರನಮಕ ಚಮಕ, ನರಕಯಾತನಾ ರಹಸ್ಯ.

ಕನ್ನಡ ಗ್ರಂಥಗಳು : ಸಟೀಕಾ ಜೈಮಿನಿಭಾರತ, ಜೈಮುನಿ ಭಾರತ, ರಾಜಶೇಖರ ವಿಲಾಸ, ಶಬರಶಂಕರ ವಿಲಾಸ, ವೃಷಭೇಂದ್ರ ವಿಜಯ, ಸಿದ್ಧೇಶ್ವರ ಪುರಾಣ, ಪ್ರಹ್ಲಾದ ಚರಿತ್ರೆ, ನಳಚರಿತ್ರೆ, ಶಿವಭಕ್ತಿಸಾರ, ಕನ್ನಡ ಮಹಾಭಾರತ, ಕನ್ನಡ ಬಾಲಬೋಧೆ, ಪಂಪ ರಾಮಾಯಣ, ಅನುಭವಸಾರ ಟೀಕು.

ಸಂಸ್ಕೃತದಲ್ಲಿ : ವೀರಶೈವೋತ್ಕರ್ಷ ಪ್ರದೀಪಿಕಾ, ಜ್ಯೋತಿಷ್ಯ ಸರ್ವವಿಷಯಾಮೃತ ಎಂಬ ಸ್ವತಂತ್ರ ಕೃತಿಗಳನ್ನು, ಕನ್ನಡದಲ್ಲಿ ನಯಶತಕ, ಕಂಚಿಯ ಶಂಕರಾಧ್ವರ ಬಸವೇಶ ವಿಜಯ ಕನ್ನಡಾನುವಾದವನ್ನು ರಚಿಸಿದ್ದಾರೆ. ಅವರ ಸ್ವತಂತ್ರ ಕೃತಿಯಾದ ನಯಶತಕ ನೀತಿ ಭರಿತವಾದದು. ಇದು ಕನ್ನಡ ಶತಕ ಸಾಹಿತ್ಯಕ್ಕೆ ನೀಡಿದ ಅಮೂಲ್ಯ ಕೃತಿಯಾಗಿದೆ. ಇದರಲ್ಲಿ ೧೨೬ ಕಂದ ಪದ್ಯಗಳೂ, ೬ ವೃತ್ತಗಳೂ ಇವೆ.

"ಕರಿಬಸವ ಶಾಸ್ತ್ರಿಗಳು ಕೃತಿಗಳನ್ನು ಹಸ್ತಪ್ರತಿಗಳ ಆಧಾರದಿಂದ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ಇದು ಆಧುನಿಕ ಗ್ರಂಥ ಸಂಪಾದನಾ ವಿಧಿ ವಿಧಾನಗಳಿಗೆ ಅನುಗುಣವಾಗಿದೆ ಎಂಬುದು ನಾವು ಮನಗಾಣಬೇಕು. ಶಾಸ್ತ್ರಿಗಳ ಬಳಿ ಪ್ರಾಚೀನ ಹಸ್ತಪ್ರತಿಗಳ ಭಂಡಾರವೇ ಇದ್ದುದಾಗಿ ತಿಳಿದುಬಂದಿದೆ. ಶಾಸ್ತ್ರಿಗಳು ಎಡೆಯೂರು ಸಿದ್ಧಲಿಂಗೇಶ್ವರನ ಭಕ್ತರಾದುದರಿಂದ ವಿರಕ್ತ ತೋಂಟ ದಾರ್ಯನ ಸಿದ್ಧೇಶ್ವರ ಪುರಾಣವನ್ನು ಶಾಸ್ತ್ರೀಯವಾಗಿ ಸಂಪಾದಿಸಿರುವುದು ಅವರ ಅಪಾರ ಭಕ್ತಿಯ ದ್ಯೋತಕ ವಾಗಿದೆ."

ಹಿರಿಯ ವಿದ್ವಾಂಸರೂ, ನಿಘಂಟು ತಜ್ಞರೂ ಆದ ಎನ್. ಬಸವಾರಾಧ್ಯರ ಮಾತುಗಳು ಔಚಿತ್ಯ ಪೂರ್ಣವಾಗಿವೆ. ಆಸ್ಥಾನ ಮಹಾವಿದ್ವಾನ್, ಕರ್ನಾಟಕ ಭಾಷಾರತ್ನ ಪಿ.ಆರ್. ಕರಿಬಸವ ಶಾಸ್ತ್ರಿಗಳು ೧೯೫೧ ರಲ್ಲಿ ಲಿಂಗೈಕ್ಯರಾದರು. ಸುಮಾರು ಎಂಬತ್ತು ಮೂರು ವರ್ಷಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದಿದ್ದ ಶಾಸ್ತ್ರಿಗಳು ವೀರಶೈವ ಧರ್ಮ ಸಾಹಿತ್ಯ ಸಂಸ್ಕೃತಗಳಿಗೆ ಅಮೂಲ್ಯ ಸೇವೆಯನ್ನು ಸಲ್ಲಿಸಿ ಅಮರರಾಗಿದ್ದಾರೆ. ಈ ಧರ್ಮದ ಪುನರುದ್ದಾರಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ್ದಾರೆ. ಇಡೀ ಜೀವಮಾನವನ್ನೆಲ್ಲ ವೀರಶೈವ ಧರ್ಮ ಕಾರ್ಯಗಳಿಗೇ ಸವೆಸಿದ ಪಿ.ಆರ್. ಕರಿಬಸವ ಶಾಸ್ತ್ರಿಗಳು ಪ್ರಾತಃ ಸ್ಮರಣೀಯರಾಗಿದ್ದಾರೆ.







ಲೇಖನ

# ಸರ್ಪಭೂಷಣ ಶಿವಯೋಗಿ

– ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

**(ಹಿಂದಿನ ಸಂಚಿಕೆಯಿಂದ)**

ಸಪ್ಪಣ್ಣಾರ್ಯರಾದ ಬಳಿಕ ಅವರಿಟ್ಟ ಮೊದಲ ಹೆಜ್ಜೆ ದೇಶಸಂಚಾರ. ಹನ್ನೆರಡು ವರ್ಷಗಳ ಸುದೀರ್ಘ ಅವಧಿಯ ಈ ದೇಶಸಂಚಾರ ಒಂದು ರೀತಿಯಲ್ಲಿ ಸಪ್ಪಣ್ಣನವರನ್ನು ಪರಿಪೂರ್ಣವಾಗಿ ರೂಪಿಸಿದ ಪವಿತ್ರ ಯಾತ್ರೆಯಾಗಿದ್ದಿತು.

ಮೊದಲು ಅವರು ಸಂದರ್ಶಿಸಿದುದು ಚಿತ್ರದುರ್ಗದ ಬೃಹನ್ಮಠವನ್ನು, ಕರ್ತೃಗದ್ದುಗೆಯ ದರ್ಶನವನ್ನು ಪಡೆದು ಅಲ್ಲಿ ನಡೆಯುತ್ತಿದ್ದ ಶಿವಾನುಭವಗೋಷ್ಠಿಗಳಲ್ಲಿ ಹಲವಾರು ದಿನ ಭಾಗವಹಿಸಿದರು. ಜಗದ್ಗುರುಗಳ ಸನ್ನಿಧಿಯಲ್ಲಿ ನಡೆಯುವ ಶರಣ ಗೋಷ್ಠಿಯಲ್ಲಿ ಒಂದು ದಿನ ಧರ್ಮಶಾಸ್ತ್ರ ಪ್ರಸಂಗ ನಡೆಯುವಾಗ ಪರಮತದ ವಿದ್ವಾಂಸರ ಕೈ ಮೇಲಾಗುವಂತಾದಾಗ ಸಪ್ಪಣ್ಣ ತಮಗಿರುವ ತರ್ಕಶಾಸ್ತ್ರದ ಪ್ರಾವೀಣ್ಯ ಹಾಗೂ ಧರ್ಮಶಾಸ್ತ್ರದ ರಹಸ್ಯವನ್ನರಿತ ವಾಗ್ಮಿಯತೆಯಿಂದ ಗೋಷ್ಠಿಯಲ್ಲಿದ್ದ ವರನ್ನೆಲ್ಲ ಬೆರಗಾಗುವಂತೆ ಮಾಡಿದ್ದು ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಈ ಕಿರಿಯ ಸ್ವಾಮೀಜಿಯ ತರ್ಕಶುದ್ಧಿಗೂ ಧರ್ಮಸಾರದ ತಿರುಳನ್ನು ಅರ್ಥೈಸಿದ ಶ್ರೀಮಂತ ವಾಗ್ಮಿತೆಗೂ ಬೆರಗಾದರು. ಹಲವರು ಈ ಕಿರಿಯ ಸ್ವಾಮಿಗಳು ಇಲ್ಲಿಯೇ ಉಳಿಯಬೇಕೆಂದು ಬಯಸಿದರು. ಸಪ್ಪಣ್ಣ ಈ ಅಪೇಕ್ಷೆಯ ಮೋಹಕ್ಕೆ ಬಲಿಯಾಗಲಿಲ್ಲ. ತಾನು ಬಂದಿರುವುದು ಬೆಳೆಯುವುದಕ್ಕೆ ಎಂದು ಸೂಚಿಸುತ್ತ ಜ್ಞಾನಾನುಭವ ಯಾತ್ರೆಯನ್ನು ಮುಂದುವರಿಸಿದರು.

ದಾವಣಗೆರೆ, ಹರಿಹರ ಹಾಗೂ ತುಂಗಭದ್ರಾ ತೀರದ ಹಲವು ಮಠಗಳನ್ನು ಹಾಗೂ ತಪೋಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿರುವ ಪೂಜ್ಯರಿಗೆಲ್ಲ ನಮಸ್ಕರಿಸಿ ಹಾವೇರಿ ಬಂಕಾಪುರಗಳ ಮಾರ್ಗವಾಗಿ ಹುಬ್ಬಳ್ಳಿಯನ್ನು ಸೇರಿದರು. ಮೂರುಸಾವಿರ ಮಠದ ಕರ್ತೃಗದ್ದುಗೆ ನಮಸ್ಕರಿಸಿ ಅಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳಲ್ಲಿ ಪಾಲ್ಗೊಂಡರು. ವಿದ್ಯೆ, ವಿನಯ, ಸಂಗೀತ ಸಾಹಿತ್ಯಗಳಲ್ಲಿರುವ ನೈಪುಣ್ಯದಿಂದ ಇಷ್ಟಲಿಂಗಾನುಸಂಧಾನದ ಆನಂದದಿಂದ ಸಮಾಜದ ಗೌರವಾದರಗಳಿಗೆ ಪಾತ್ರರಾದರು. ಸಮಾಜದ ಗಣ್ಯರು ಸಪ್ಪಣ್ಣನವರಿಂದ ಎಷ್ಟು ಆಕರ್ಷಿತರಾದರೆಂದರೆ ಅಲ್ಲಿಯೇ ಉಳಿದುಬಿಡಲಿ ಎಂದು ಒತ್ತಾಯಿಸಿದರು. ಆದರೆ ಹಿಂಡನಗಲಿದ ಗಜದಂತೆ ಸಪ್ಪಣ್ಣ ಅಲ್ಲಿಂದ ಮುನ್ನಡೆದರು.

ಅನೇಕ ಶಿವಕ್ಷೇತ್ರಗಳನ್ನು ಸಂದರ್ಶಿಸಿ ಕೊನೆಯಲ್ಲಿ ಶಿವನ ಆವಾಸಸ್ಥಾನವೆಂದೂ ಜ್ಞಾನಗಂಗೋತ್ರಿಯೆಂದೂ ಖ್ಯಾತವಾದ ವಾರಣಾಸಿಯ ವಿಶ್ವನಾಥನ ಸಂದರ್ಶನ ಭಾಗ್ಯ ಪಡೆದು ಆ ಸನ್ನಿಧಾನದಲ್ಲಿ ಕೆಲವು ಕಾಲ ಕಳೆದರು. ನಿಜಗುಣರ ಹಾಡುಗಳನ್ನು ತಾಂಡವ ಸ್ತೋತ್ರ ಮೊದಲಾದವುಗಳನ್ನು ಹಾಡಿಕೊಳ್ಳುತ್ತ, ಆನಂದ ಸಾಗರದಲ್ಲಿ ಮುಳುಗೇಳುತ್ತಿದ್ದರು. ಎಷ್ಟೋ ವೇಳೆ ಅವರ ಪ್ರತಿಭೆ ಹಾಡುಗಳ ರಚನೆಗೆ ಹಾಗೂ ಶಿವಸ್ತೋತ್ರ ರಚನೆಗಳ ಗುಂಗಿಗೊಳಗಾಗುತ್ತಿದ್ದಿತು.

ಅಲ್ಲಿಂದ ಮುಂದೆ ಶಿವಯೋಗಿ ಸಿದ್ಧರಾಮನ ಕಾರ್ಯಕ್ಷೇತ್ರವಾದ ಸೊನ್ನಲಿಗೆಯಲ್ಲಿ ಸಿದ್ಧರಾಮನನ್ನೇ ಕಂಡಂತೆ ಹಿಗ್ಗಿದರು. ಹನ್ನೆರಡನೆಯ ಶತಮಾನದ ಮಹಾಕ್ರಾಂತಿಯ ನೇತಾರನಾಗಿದ್ದ ಬಸವನ ಬಾಗೇವಾಡಿ, ಇಂಗಳೇಶ್ವರಗಳನ್ನು ಸಂದರ್ಶಿಸಿ ಕರ್ನಾಟಕದ ಸಂಸ್ಕೃತಿಗೆ ಬಸವಣ್ಣ ನೀಡಿದ ಮಹತ್ತರವಾದ ಕೊಡುಗೆಗಳನ್ನು ನೆನೆದು ಪುನೀತರಾದರು. ಬಸವಣ್ಣನವರ ವ್ಯಕ್ತಿತ್ವವನ್ನು ರೂಪುಗೊಳಿಸುವಲ್ಲಿ ಮಹತ್ತರ ಪಾತ್ರವಹಿಸಿದ ಕೂಡಲಸಂಗಮ ಅವರ ಪಾಲಿಗೆ ಒಂದು ಮಹಾನ್ ವಿದ್ಯಾಪೀಠದಂತೆ ಭಾಸವಾಯಿತು. ಇಲ್ಲಿಯೆ ಅಲ್ಲವೆ ಬಸವಣ್ಣನ ವ್ಯಕ್ತಿತ್ವಕ್ಕೆ ಪೂರ್ಣತೆಯ ಅರಿವು ಮೂಡತೊಡಗಿದ್ದುದು!

* ನಂ. ೨೦೩,'ಲಲಿತಕೃಪ' ಒನೇ 'ಎ' ಮುಖ್ಯರಸ್ತೆ, ವಿಜಯನಗರ ಪೂರ್ವ, ಬೆಂಗಳೂರು-೫೬೦ ೦೪೦

ಅಲ್ಲಿಂದ ಮುಂದೆ ಗುಳೇದಗುಡ್ಡ ಮೊದಲಾದ ಪ್ರದೇಶಗಳನ್ನು ಸಂಚರಿಸಿ, ಬಾಗಿಲುಕೋಟೆಗೆ ಬಂದರು. ಆಶ್ಚರ್ಯವೆಂದರೆ ಇವರ ಸಂಚಾರದ ವಿವರಗಳನ್ನು ಪಡೆದ ಭಕ್ತಾದಿಗಳು ಶಿವಪೂಜೆಗೆ ಇವರನ್ನು ಆಹ್ವಾನಿಸುತ್ತಿದ್ದರು. 'ಲಿಂಗಪೂಜೆಯ ಮಾಡಿರೋ' ಎಂಬ ಅವರ ಹಾಡು ಹುಟ್ಟಿದ್ದು ಇಂಥದ್ದೇ ಒಂದು ಸಂದರ್ಭದಲ್ಲಿ 'ಅರಿವನರಿದಿಹೆನೆಂದು ಕ್ರಿಯೆಯ ಬಿಡಬಹುದೇ' ಎಂಬುದು ಅವರ ನಿಲವು. ಅವರ ದಿನಚರಿ ಎಂದರೆ ಇಷ್ಟಲಿಂಗಾರ್ಚನೆ, ಅಧ್ಯಯನ, ಧ್ಯಾನ – ಸಂಜೆ ಶರಣ ಗೋಷ್ಠಿಯಿದ್ದರೆ ಅಲ್ಲಿ ಪ್ರವಚನ–ಗೋಷ್ಠಿ ಯಿಲ್ಲದಿದ್ದರೆ ಅಧ್ಯಯನ ಮತ್ತು ಧ್ಯಾನ. ಧ್ಯಾನ ಸಮಯದಲ್ಲೆಷ್ಟೋ ಅದ್ಭುತವಾದ ರಾಗಗಳ ಸಂಪತ್ತು ಅವರ ಸುಮಧುರ ಶಾರೀರದಿಂದ ತುಳುಕಿ ಬಿಡುತ್ತಿತ್ತು.

ಶ್ರೀಗಳವರ ಇಷ್ಟಲಿಂಗಾರ್ಚನೆ, ಸಂಗೀತ, ಸಾಹಿತ್ಯ ಮತ್ತು ದರ್ಶನಗಳಲ್ಲಿರುವ ಜ್ಞಾನ ಹಾಗೂ ವಿನಯಗಳಿಗೆ, ಜೊತೆಜೊತೆಗೆ ಅವರ ಅದ್ಭುತವಾದ ವಾಗ್ಮಿತೆಗೆ ಮರುಹೋದವರಲ್ಲಿ ಮುಖ್ಯವಾದವರು ಹಲವರು. ಕಲಾದಿಗಿಯ ಹಿರಿಯ ಮಠದ ಪಟ್ಟದ್ದೇವರು, ಗುರುಲಿಂಗ ಸ್ವಾಮಿಗಳು, ಬೀಳಗಿ ಮಠದ ಪಟ್ಟಾಧ್ಯಕ್ಷರಾದ ಶ್ರೀಕರ ವೀರಪ್ಪ ಸ್ವಾಮಿಗಳು ಮತ್ತೆ ಕೆಲವರು ಶಿವಯೋಗಿಗಳಿಂದ ಅನುಗ್ರಹ ಕ್ರಿಯಾದಿಗಳನ್ನು ಪಡೆದವರಾಗಿದ್ದರು.

ಪ್ರವಾಸವನ್ನು ಪವಿತ್ರ ಯಾತ್ರೆಯಂತೆ ನಡೆಸಿದ ಸಪ್ಪಣ್ಣನವರು ಮಾನವಾಂತಃಕರಣವನ್ನು ಪಡೆದವ ರಾಗಿದ್ದರು. ತಮ್ಮ ಪೂಜೆಗೆ ಆಹ್ವಾನಿಸಿದ್ದ ಭಕ್ತರಲ್ಲಿ ಒಬ್ಬರು ಮಡದಿಯನ್ನು ಕಳೆದುಕೊಂಡ ದುಃಖದಲ್ಲಿ ಮುಳುಗಿ ದ್ದಾಗ ಅವರನ್ನು ಸಂತೈಸಿ ಜೀವನೋತ್ಸಾಹವನ್ನು ಮೂಡಿಸಿದ ಘಟನೆ ಸ್ಮರಣಾರ್ಹವಾದುದು. ತಾನು ಸಂನ್ಯಾಸಿಯಾಗಿದ್ದರೂ ಭಕ್ತನ ಮಡದಿಯ ಶವಸಂಸ್ಕಾರ ದಲ್ಲಿ ಪಾಲ್ಗೊಂಡ ಅಂತಃಕರಣ ಅವರದು. ಒಮ್ಮೆ ಬಡ ಮುದುಕಿಯೊಬ್ಬಳು ಎದುರಾಗಿ ತಮ್ಮ ಗುಡಿಸಲಿನಲ್ಲಿ ಪೂಜೆ ನಡೆಸಿಕೊಡಬೇಕೆಂದು ಪ್ರಾರ್ಥಿಸಿದಾಗ ಅವಳ ಅಂತಃಕರಣದ ಕರೆಗೆ ಓಗೊಟ್ಟು ಇಷ್ಟಲಿಂಗಪೂಜೆ ನೆರವೇರಿಸಿದರು. ಅಷ್ಟೇ ಅಲ್ಲ; ಆಕೆ ಬಡಿಸಿದ ನವಣೆಯ ಅನ್ನ ಮತ್ತೆ ಅದಕ್ಕಾಗಿ ನೀಡಿದ ಹುಣಸೆಯ ಹಿಂಡಿಯನ್ನು ಅಮೃತಾನ್ನವೆಂದು ಸವಿದ ರೀತಿ ಅವರ ಸರಳತೆಗೆ ಒಂದು ನಿದರ್ಶನವೆನ್ನಬೇಕು. ಸಪ್ಪಣ್ಣನವರದು ಲೋಕವನ್ನು ಗೆಲ್ಲುವ ಸರಳತೆಯ ವಿರಾಗಮಾರ್ಗ. ತಮ್ಮ ಕೃತಿಗಳ ಮೂಲಕ ಅದವನ್ನವರು ಅಭಿವ್ಯಕ್ತಿಗೊಳಿಸಿದರು.

ಉರವಕೊಂಡದ ಶ್ರೀ ಗವಿಮಠವು ಅಲ್ಲಮಪ್ರಭು ಸಂಪ್ರದಾಯದ ಮಠವೆಂದು ಖ್ಯಾತವಾಗಿದ್ದಿತು. ಅಲ್ಲಿನ ಹಿರಿಮೆಯೆಂದರೆ ಅಲ್ಲಿ ನಡೆಯುವ ಅನುಭಾವ ಗೋಷ್ಠಿಗಳು; ಸಪ್ಪಣ್ಣನವರು ಅಲ್ಲಿಯ ಗೋಷ್ಠಿಗಳಲ್ಲಿ ಪಾಲ್ಗೊಂಡಾಗ ಅವರ ವಿದ್ವತ್ತು, ಪ್ರತಿಭೆ, ವೈರಾಗ್ಯ ಹಾಗೂ ಲೋಕಜ್ಞಾನವನ್ನು ಕಂಡು ಮಾರುಹೋಗಿದ್ದುದೇ ಅಲ್ಲದೆ ಅವರ ಅನುಷ್ಠಾನಕ್ಕೆ ಅನುಕೂಲವಾಗುವಂತೆ ಬಂಡೆಗಳ ನಡುವೆ ಒಂದು ಚಿಕ್ಕಮಠವನ್ನೇ ನಿರ್ಮಿಸಿಕೊಟ್ಟರು. ಇಲ್ಲಿ ಒಂದು ಅತ್ಯುತ್ತಮವಾದ ಪ್ರಾಚೀನ ಗ್ರಂಥಗಳ ಭಂಡಾರವೇ ಇದ್ದು ಇಂದಿಗೂ ಅದು ಸಪ್ಪಣಾರ್ಯರ ಗವಿ ಎಂದೇ ಪ್ರಖ್ಯಾತವಾಗಿದೆ; ಇದನ್ನು ವಿದ್ಯಾನಿಧಿ ಭಂಡಾರವೆನ್ನುತ್ತಿದ್ದ ಸಪ್ಪಣಾರ್ಯರ ವ್ಯಕ್ತಿತ್ವಕ್ಕೆ ಮಾರುಹೋದ ಉರವಕೊಂಡದ ಮಹಾಸ್ವಾಮಿಗಳು ಶ್ರೀಶೈಲಕ್ಕೆ ಇವರ ಜೊತೆಗೇ ಯಾತ್ರೆ ಹೊರಟರು – ಹಾಗೆ ಶ್ರೀಶೈಲ ಯಾತ್ರೆ ಮಾಡುತ್ತಿರುವಾಗ ಫಾಲಲೋಚನ ಸ್ವಾಮಿಗಳ ಪರಿಚಯವಾಯಿತು. ವಿರಕ್ತರಾದ ಅವರು ಸಪ್ಪಣ್ಣನವರ ಸೇವೆಗೆ ಸಿದ್ಧವಾದರೂ ಸಪ್ಪಣ್ಣನವರು ಅದಕ್ಕೊಪ್ಪಲಿಲ್ಲ. ಬದಲಾಗಿ ನೀವು ಬೆಂಗಳೂರಿನಲ್ಲಿ ನೆಲಸಿರಿ. ಯಾತ್ರೆಯನ್ನು ಮುಗಿಸಿ ಕೊಂಡು ಬಂದು ನಿಮ್ಮನ್ನು ನಾವು ಸೇರಿಕೊಳ್ಳುತ್ತೇವೆ ಎಂದು ಒಪ್ಪಿಸಿ ಅವರನ್ನು ಬೆಂಗಳೂರಿಗೆ ಕಳುಹಿಸಿ ಕೊಟ್ಟರು.

ಸಪ್ಪಣ್ಣನವರ ಶಿವಪೂಜೆ ಬರುಬರುತ್ತ ಸರಳ ವಾಗುತ್ತ ಬಂದಿತೆನ್ನಬಹುದು. ಏಕೆಂದರೆ ಅವರಿಗೆ ಪೂಜೆಯೂ ಒಂದು ಆಡಂಬರದ ವಿಧಿಯಾಗಿಬಿಟ್ಟರೆ ಗತಿಯೇನು ಎಂದು ಅನ್ನಿಸಿತು.

ಶಿವಪೂಜೆಯ ವಿಷಯದಲ್ಲಿ ಅವರಿಗಿದ್ದ ಆಸಕ್ತಿ ಕೈಯಲ್ಲಿ ಲಿಂಗವನ್ನು ಧರಿಸಿ ಧ್ಯಾನ ಮಾಡುವ ಒಂದು ದಂಧೆಯಾಗಿರಲಿಲ್ಲ. ಅದು ತನ್ನೊಳಗಿರುವ ಶಿವನನ್ನು ಇಷ್ಟಲಿಂಗದಲ್ಲಿ ಕಾಣುವ ಒಂದು ಸಾಧನೆಯಾಗಿತ್ತು. ಅದರಿಂದಾಗಿಯೇ ಅವರು ಪೂಜಾಗೃಹ ಮೊದಲಾದವು



ಗಳನ್ನು ಅವಲಂಬಿಸಿರುತ್ತಿರಲಿಲ್ಲ. ವಾಸ್ತವವಾಗಿ ಸುರಪುರದ ಅರಸರ ಮಂತ್ರಿಗಳು ಪೂಜೆಗಾಗಿ ಆಹ್ವಾನಿಸಿದಾಗ ಸಂಕೋಚದಿಂದಲೇ ಹೊರಟರು. ಮಾರ್ಗಮಧ್ಯದಲ್ಲಿ ಒಂದು ಭಾವಿ ಕಾಣಿಸಿತು. ಅಲ್ಲಿಯೇ ಮಿಂದು ಶಿವಪೂಜೆಗೆ ಕುಳಿತುಬಿಟ್ಟರು. ಮಂತ್ರಿಗಳ ಕಡೆಯವರು ಬೆರಗಾಗಿ ಸ್ವಾಮಿಜಿಯ ವರ್ತನೆ ಬಗ್ಗೆ ಗೊಂದಲಕ್ಕೆ ಬಿದ್ದರು. "ಸ್ವಾಮಿಗಳೇ ಇದು ಹೊಲೆಯರ ಭಾವಿ ಇಲ್ಲಿ ಮಿಂದದ್ದು ಸರಿಯೆ?" ಎಂದು ಪ್ರಶ್ನಿಸಿದರು. ಸಪ್ಪಣ್ಣನವರು ವೇದಾಗಮಗಳನ್ನು ಮತ್ತು ವಚನಗಳನ್ನು ಓದಿದ್ದು; ಓದಿ ಓದಿ ಕೂಚಂಭಟ್ಟರಾಗುವುದಕ್ಕಾಗಿ ಅಲ್ಲ, ತಮ್ಮ ಅರಿವಿಗೆ ವಿಸ್ತಾರವನ್ನೂ ಆಳವನ್ನೂ ತಂದು ಕೊಳ್ಳುವುದಕ್ಕಾಗಿ. ತಟ್ಟನೆ ಅವರಿಗೆ ಜೇಡರ ದಾಸಿಮಯ್ಯನ ವಚನ ನೆನಪಾಯಿತು. ತಾವು ಉತ್ತರಿಸುವ ಬದಲು ಆ ವಚನವನ್ನು ಅವರೆದುರು ಸುಶ್ರಾವ್ಯವಾಗಿ ಹೃದಯಕ್ಕೆ ತಟ್ಟುವಂತೆ ಹಾಡಿದರು –

**ಹೊಲೆಯರ ಭಾವಿಯಲ್ಲೊಂದು ಎಲು ನಟ್ಟಿದ್ದರೆ**
**ಹೊಲೆಯೆಂಬುದು ಲೋಕವೆಲ್ಲ,**
**ಹಲವೆಲುವಿದ್ದ ಬಾಯಿ ಒಲವರವ ನುಡಿದಡೆ**
**ಹೊಲೆಯರ ಬಾವಿಯಿಂದ ಕರಕಷ್ಟ ಕಾಣಾ ರಾಮನಾಥ.**

ವಚನದ ಅರ್ಥ ಹೃದಯಕ್ಕೆ ಮುಟ್ಟಿದ ಮಂತ್ರಿಗಳ ಕಡೆಯವರು ಹೊಸ ಅನುಭವವೊಂದನ್ನು ಪಡೆದು ಧನ್ಯರಾದರು.

ಒಮ್ಮೆಯಂತು ಅವರು ಶಿವಪೂಜಾಗೃಹವನ್ನು ಹೊಕ್ಕಾಗ ಅವರ ಪೂರ್ವಾಶ್ರಮದ ಸೋದರಿ ಹೊಸತಿಲಿನ ಹೊರಗೆ ಕುಳಿತದ್ದನ್ನು ಕಂಡು ಹಾಗೇಕೆ ಮಾಡಿದೆ ಎಂದು ಪ್ರಶ್ನಿಸಿದರು. ಆಕೆ ತಾನು ರಜಸ್ವಲೆಯಾಗಿರುವುದರಿಂದ ಹಾಗೆ ಮಾಡಿದೆನೆಂದಾಗ ತಟ್ಟನೆ ಅದು ಪ್ರಕೃತಿನಿಯಮ– ಖಂಡಿತವಾಗಿ ಸೂತಕ ಅಲ್ಲ – ಅಷ್ಟೇ ಅಲ್ಲ ಪೂಜೆಗೆ ಮುಖ್ಯವಾದದ್ದು ಪರಿಶುದ್ಧವಾದ ಮನಸ್ಸು, ಇಂಥ ದೈಹಿಕ ನಿಯಮಗಳನ್ನು–ಸೂತಕಗಳನ್ನು ನಮ್ಮ ಶರಣಧರ್ಮ ಖಂಡಿತ ಒಪ್ಪುವುದಿಲ್ಲ ಎಂದು ಆಕೆಗೆ ಸಮಾಧಾನ ಹೇಳಿ ಪೂಜಾಗೃಹದ ಒಳಕ್ಕೆ ಪ್ರವೇಶ ಮಾಡಿಸಿದರು. 'ಲಿಂಗಪೂಜೆಯ ಮಾಡಿರೊ' ಅವರ ಹಾಡೊಂದಿದೆ. ಆ ಹಾಡು ಅನುಭಾವದ ವಲಯವನ್ನು ಪ್ರವೇಶಿಸಿದ ಹಾಡು.

ಕೊನೆಕೊನೆಗೆ ಸಪ್ಪಣ್ಣನವರು ಗಂಟೆಗಟ್ಟಲೆ ಪೂಜೆಗೆ ಕುಳಿತುಕೊಳ್ಳುತ್ತಿರಲಿಲ್ಲ. ಬರುತ್ತಿದ್ದ ಭಕ್ತಾದಿಗಳಿಗೆ ಮಾರ್ಗದರ್ಶನ ಮಾಡುವುದರಲ್ಲಿ ನಿರತರಾಗಿ ಭಕ್ತರಲ್ಲೆಲ್ಲ ಶಿವನನ್ನು ಕಾಣುವ ಸ್ಥಿತಿಗೆ ಏರಿಬಿಟ್ಟರು.

ಶ್ರೀಶೈಲ ಯಾತ್ರೆಯನ್ನು ಮುಗಿಸಿ ಬೆಂಗಳೂರಿಗೆ ಹಿಂದಿರುಗಿ ಗುರುಗಳನ್ನು ಕಾಣಬೇಕೆಂಬ ಅಭಿಲಾಷೆ ಮೂಡಿತು. ಇಷ್ಟರಲ್ಲೆ ತಮ್ಮ ಪೂರ್ವಾಶ್ರಮದ ತಂದೆಯವರು ತಮ್ಮ ನೆನಪಿನಲ್ಲೆ ಕೈಲಾಸವಾಸಿಗಳಾದ ಸುದ್ದಿಯೂ ಮುಟ್ಟಿತು. ಆತುರಾತುರವಾಗಿಯೆ ಬೆಂಗಳೂರನ್ನು ಮುಟ್ಟಿದರು.

ಹನ್ನೆರಡು ವರುಷಗಳ ಸುದೀರ್ಘ ಅವಧಿಯಲ್ಲಿ ದೇಶಸಂಚಾರ ಮಾಡಿಬಂದ ಶಿಷ್ಯ ಸಣ್ಣಪ್ಪನವರ ಮುಖದಲ್ಲಿ ಗುರುಗಳಾದ ಗುರುಸಿದ್ಧರಿಗೆ ಒಂದು ಹೊಸ ತೇಜಸ್ಸು ಹೊಮ್ಮುತ್ತಿರುವಂತೆ ಭಾಸವಾಯಿತು.

ಎಷ್ಟೋ ವರುಷಗಳ ಹಿಂದೆ ತುಂಟ ಬಾಲಕನಾಗಿದ್ದ ಸಪ್ಪಣ್ಣ ಈತನೇಯೆ ಎಂದು ನೆನೆಸಿಕೊಂಡು ಹಿಗ್ಗಿದರು. ಇಂದಿನ ಸಪ್ಪಣ್ಣನವರ ಮುಖದ ತೇಜಸ್ಸು ಅವರಿಗೆ ಶಿವನ ತೇಜಸ್ಸಾಗಿ ಕಂಡಿತು.

ತಮ್ಮ ಮಠಕ್ಕೆ ಅತ್ಯಂತ ಸೂಕ್ತನಾದ ಸ್ವಾಮೀಜಿ ಒಬ್ಬರು ದೊರಕಿದರು ಎಂದು ಹಿರಿಹಿರಿ ಹಿಗ್ಗಿದರು. ಇಂಥ ನೆಮ್ಮದಿಯಲ್ಲಿ ಒಂದು ದಿನ ಶಿವಪೂಜೆಯಲ್ಲಿ ಮುಳುಗಿದ್ದಾಗಲೆ ಶಿವೈಕ್ಯರಾಗಿಬಿಟ್ಟರು. ಶ್ರೇಷ್ಠ ಪರಿವ್ರಾಜಕರಾಗಿ ಹನ್ನೆರಡು ವರುಷ ತೀರ್ಥಕ್ಷೇತ್ರಗಳನ್ನು ಅಲ್ಲಿಯ ಗುರುಗಳು, ವಿದ್ವಾಂಸರು ಹಾಗೂ ಜನರನ್ನು ಕಂಡು ಅನುಭವ ಶ್ರೀಮಂತಿಕೆಯಿಂದ ತುಳುಕಾಡುತ್ತಿದ್ದ ಸಪ್ಪಣ್ಣನವರನ್ನೇ ಮಠದ ಅಧ್ಯಕ್ಷರಾಗಿ ಮಾಡಬೇಕೆಂದು ಸಮಾಜದ ಹಿರಿಯರೆಲ್ಲ ಮನಸ್ಸು ಮಾಡಿದರು. ಆದರೆ ಸಪ್ಪಣ್ಣನವರು ಅದಕ್ಕೆ ಒಪ್ಪಲಿಲ್ಲ. ಮಠದಲ್ಲೆ ಇದ್ದ ಗುರುಸಿದ್ಧ ಸ್ವಾಮಿಗಳ ಶಿಷ್ಯರಾಗಿದ್ದ ಚಿಕ್ಕ ಗುರುಸಿದ್ಧ ಸ್ವಾಮಿಗಳೆಂದೇ ಖ್ಯಾತರಾಗಿದ್ದವರನ್ನು ಬಲವಂತವಾಗಿ ಮಠಾಧ್ಯಕ್ಷ ಸ್ಥಾನಕ್ಕೆ ಒಪ್ಪಿಸಿ ತಾವು ಶಿವಪೂಜೆ, ಪ್ರವಚನ, ಮಾರ್ಗದರ್ಶನ ಹಾಗೂ ಸಾಹಿತ್ಯ ರಚನೆಯಲ್ಲಿ ಮುಳುಗಿಬಿಟ್ಟರು.

(ಮುಂದುವರೆಯುತ್ತದೆ)

ಶರಣಾಂಜಲಿ

# ಕುಪ್ಪೂರು ಗದ್ದುಗೆ ಸಂಸ್ಥಾನ ಮಠದ ಪೀಠಾಧ್ಯಕ್ಷರಾಗಿದ್ದ ಪೂಜ್ಯ ಡಾ. ಶ್ರೀ ಶ್ರೀ ಶಿವಾಚಾರ್ಯ ಸ್ವಾಮೀಜಿ ಲಿಂಗೈಕ್ಯ



ತುಮಕೂರು ಜಿಲ್ಲೆ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕುಪ್ಪೂರು ಸಂಸ್ಥಾನ ಮಠದ ಪೀಠಾಧ್ಯಕ್ಷರಾಗಿದ್ದ ಪೂಜ್ಯ ಡಾ. ಶ್ರೀ ಶ್ರೀ ಶಿವಾಚಾರ್ಯ ಸ್ವಾಮೀಜಿ ಅವರು ಸೆಪ್ಟೆಂಬರ್ ೨೫ ರಂದು ಹೃದಯಾಘಾತದಿಂದ ಲಿಂಗೈಕ್ಯರಾದರು. ಅವರಿಗೆ ೪೭ ವರ್ಷವಾಗಿತ್ತು.

ಮರುಳಸಿದ್ಧರ ವಂಶ ಪರಂಪರೆಯ ಶ್ರೀ ವ್ಯೋಮಕೇತಯ್ಯ ಮತ್ತು ಶ್ರೀಮತಿ ದೇವಿರಮ್ಮ ದಂಪತಿಗಳಿಗೆ ಕಿರಿಯ ಪುತ್ರರಾಗಿ ಜುಲೈ ೨೯, ೧೯೭೪ ರಲ್ಲಿ ಜನಿಸಿದರು. ಪದವಿಪೂರ್ವ ಕಾಲೇಜಿಗೆ ದಾಖಲಾಗುವ ಮುನ್ನವೇ ತಮ್ಮ ೧೬ನೇ ವಯಸ್ಸಿಗೆ ಮಠದ ಉತ್ತರಾಧಿಕಾರಿಯಾದ ಇವರು ಬೆಂಗಳೂರಿನ ಮಹಂತರ ಮಠದಲ್ಲಿ, ನಂತರ ಮುಡುಕತೊರೆಯಲ್ಲಿ ವೇದ, ಸಂಸ್ಕೃತ, ಆಗಮ, ಜ್ಯೋತಿಷ್ಯ, ಶಿವಯೋಗ ಮುಂತಾದ ವಿದ್ಯೆಗಳನ್ನು ಹಾಗೂ ಪುರಾಣಗಳ ಜ್ಞಾನವನ್ನು ಪಡೆದರು. 'ವೀರಶೈವ ಧಾರ್ಮಿಕ ಸಂಸ್ಕಾರಗಳು ಮತ್ತು ಸಾಮಾಜಿಕ ಸ್ವಾಸ್ಥ್ಯ' ಎಂಬ ವಿಷಯವನ್ನು ಕುರಿತ ಸಂಶೋಧನಾ ಪ್ರಬಂಧಕ್ಕೆ ಶ್ರೀಲಂಕಾದ ಕೊಲಂಬೋ ವಿಶ್ವವಿದ್ಯಾಲಯ ಪಿ.ಹೆಚ್‌ಡಿ ಪದವಿ ನೀಡಿತು. ಶ್ರೀಮಠದಲ್ಲಿ ತ್ರಿಕಾಲಪೂಜೆ, ದಾಸೋಹ, ಶಿವಾನುಭವಗೋಷ್ಠಿ, ಕಾರ್ತಿಕ ದೀಪೋತ್ಸವ, ಭಾವೈಕ್ಯ ಸಮ್ಮೇಳನ ಹೀಗೆ ನಿರಂತರವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿದ್ದರು. ಸಮಾಜದಲ್ಲಿ ಇವರು ಬಿತ್ತಿದ ಧಾರ್ಮಿಕ ಚಿಂತನೆಗಳು ಯುವಕರ ಮೇಲೆ ಪರಿಣಾಮಬೀರಿ ದುಶ್ಚಟಗಳನ್ನು ತೊರೆದು ಭವಿಷ್ಯದಲ್ಲಿ ಬೆಳಕನ್ನು ಕಂಡುಕೊಂಡರು.

ಧಾರ್ಮಿಕ ಚಟುವಟಿಕೆಗಳ ಜೊತೆ ಸಾಮಾಜಿಕ ಚಟುವಟಿಕೆಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದ ಪೂಜ್ಯ ಶ್ರೀಗಳವರು ಚಿಕ್ಕನಾಯಕನಹಳ್ಳಿ ತಾಲ್ಲೂಕಿಗೆ ಹೇಮಾವತಿ ನೀರು ಹರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಈ ಸಂಬಂಧ ನಡೆದ ಹೋರಾಟದ ದಿವ್ಯ ನೇತೃತ್ವ ವಹಿಸಿದ್ದರು. ಈ ಹೋರಾಟ ಯಶಸ್ವಿಯಾಗಲು ಎಲ್ಲರ ಸಹಕಾರ ಕೋರಲು ಬೀದಿ ಬೀದಿಗಳಲ್ಲಿ ಪಾದಯಾತ್ರೆ ಮಾಡುವುದರ ಮೂಲಕ ಹೇಮಾವತಿ ನೀರಾವರಿ ಹೋರಾಟಕ್ಕೆ ಶಕ್ತಿ ತುಂಬಿದರು. ಪೂಜ್ಯ ಶ್ರೀಗಳವರು ಧಾರ್ಮಿಕ ನಿಷ್ಠೆ, ಜನಪರ ಕಾಳಜಿಗಳಿಂದ ಜನಮಾನಸಕ್ಕೆ ಹತ್ತಿರವಾಗಿದ್ದರು.

ಪೂಜ್ಯ ಡಾ. ಶ್ರೀ ಶ್ರೀ ಯತೀಶ್ವರ ಶಿವಾಚಾರ್ಯ ಸ್ವಾಮೀಜಿಯವರು ಲಿಂಗೈಕ್ಯರಾದ ಸುದ್ದಿಯನ್ನು ತಿಳಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಸಂತಾಪ ಸಂದೇಶದಲ್ಲಿ "ಡಾ. ಯತೀಶ್ವರ ಶಿವಾಚಾರ್ಯ ಸ್ವಾಮೀಜಿ ಕೈಲಾಸವಾಸಿಗಳಾದ ವಿಷಯ ದುಃಖ ತಂದಿದೆ. ಪೂಜ್ಯರ ಕಾಲದಲ್ಲಿ ಕುಪ್ಪೂರು ಮಠ ಬಹಳ ಎತ್ತರಕ್ಕೆ ಬೆಳೆದಿದೆ. ಅನೇಕ ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಮಾಜದ ಅಭಿವೃದ್ಧಿಗೆ ಮತ್ತು ಧರ್ಮ ಪ್ರಚಾರಕ್ಕೆ ಶ್ರಮಿಸಿದ್ದರು" ಎಂದು ತಿಳಿಸಿದ್ದಾರೆ.

ಪೂಜ್ಯರ ದಿವ್ಯಚೇತನಕ್ಕೆ ಸಿದ್ಧಗಂಗಾ ಭಕ್ತಿಪೂರ್ವಕ ಶ್ರದ್ಧೆಯನ್ನು ಅರ್ಪಿಸುತ್ತದೆ.



ಲೇಖನ

# 'ಕಲ್ಲನಾಗರ....' ವಚನದ ನಿಜ ಆಶಯಗಳು

– ಡಾ. ಬಸವರಾಜ ಮೋದಿ *

ಇತ್ತೀತ್ತಲಾಗಿ ಹಲವಾರು ಪ್ರಗತಿಪರರು, ಚಿಂತನಶೀಲರು ಮತ್ತು ವೈಚಾರಿಕ ಸಂಘಟನೆಗಳು ಸಾಂಪ್ರದಾಯಿಕವಾಗಿ ಬಂದ ನಾಗರ ಪಂಚಮಿಯನ್ನು 'ಹಾಲನೆರೆಯುವ' ಹಬ್ಬವನ್ನಾಗಿ ಆಚರಿಸದೆ 'ಹಾಲು ಕುಡಿಸುವ ಹಬ್ಬ'ವನ್ನಾಗಿ ಆಚರಿಸುತ್ತಿದ್ದಾರೆ. ಅವರ ಈ ಪ್ರಗತಿಪರ ಆಚರಣೆಗೆ ಬಸವಣ್ಣನವರ ಕೆಳಗಿನ ವಚನ ಪ್ರೇರಣೆ ನೀಡಿದೆಯೆಂಬುದು ಕಂಡುಬರುತ್ತದೆ.

**ಕಲ್ಲನಾಗರ ಕಂಡಡೆ ಹಾಲನೆರೆಯೆಂಬರು,**
**ದಿಟನಾಗರ ಕಂಡಡೆ ಕೊಲ್ಲೆಂಬರಯ್ಯಾ,**
**ಉಂಬ ಜಂಗಮ ಬಂದಡೆ ನಡೆಯೆಂಬರು,**
**ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ,**
**ನಮ್ಮ ಕೂಡಲಸಂಗನ ಶರಣರ ಕಂಡು**
**ಉದಾಸೀನವ ಮಾಡಿದಡೆ ಕಲ್ಲುತಾಗಿದ ಮಿಟ್ಟೆಯಂತಿಪ್ಪರಯ್ಯಾ.**

ಇದೊಂದು ಬಹಳ ಪ್ರಸಿದ್ಧವಾದ, ಅರ್ಥಪೂರ್ಣವಾದ ವಚನ. ಈ ವಚನದ ಪ್ರತಿಯೊಂದು ಸಾಲು ತನ್ನದೇ ಆದ ಸಂದೇಶವನ್ನು ನೀಡುತ್ತದೆ.

ಬಸವಣ್ಣನವರು, ಮೊದಲನೆಯ ಸಾಲಿನಲ್ಲಿ ಈಗಲೂ ಅವ್ಯಾಹತವಾಗಿ ಸಾಗಿರುವ ಕಲ್ಲುನಾಗರ ಪೂಜೆಯನ್ನು ಕುರಿತು ಹೇಳುತ್ತಾ, ಅದರ ಅಂತ್ಯದಲ್ಲಿ 'ಎಂಬರು' ಎಂಬ ಪದವನ್ನು ಸೇರಿಸಿ, ಹಾಗೆ ಮಾಡಬಾರದು, ಅದು ಉಚಿತವಲ್ಲವೆಂದು ತನ್ನ ಅಸಮ್ಮತಿಯನ್ನು ಸೂಚಿಸುತ್ತಾರೆ. ಅದೇ ರೀತಿ ಎರಡನೆಯ ಸಾಲಿನಲ್ಲಿ ಜೀವಂತ ಹಾವನ್ನು ಕಂಡಕೂಡಲೇ ಭಯದಿಂದ ಅದನ್ನು ಕೊಲ್ಲಲು ಹವಣಿಸುವುದನ್ನು ಉಲ್ಲೇಖಿಸುತ್ತ ಕೊನೆಯಲ್ಲಿ 'ಎಂಬರಯ್ಯಾ' ಎಂಬ ವಿಡಂಬನಾತ್ಮಕ ಪದ ಸೇರಿಸಿ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಾರೆ. ಜೀವಂತ ಹಾವನ್ನು ಕೊಲ್ಲದಿರುವಂತೆ ಸೂಚನೆ ನೀಡುತ್ತಾರೆ. ಈ ಎರಡು ಸಾಲುಗಳ ಮುಖಾಂತರ ಬಸವಣ್ಣನವರು ಎರಡು ಉನ್ನತ ಸಾಮಾಜಿಕ ಸಂದೇಶಗಳನ್ನು ನೀಡುತ್ತಾರೆ. ಮೊದಲನೆಯ ಸಾಲಿನಲ್ಲಿ ವಿಗ್ರಹಾರಾಧನೆಯನ್ನು ತಿರಸ್ಕರಿಸುತ್ತಾರೆ. ಎರಡನೆಯ ಸಾಲಿನಲ್ಲಿ ಅಹಿಂಸೆಯನ್ನು ಪ್ರತಿಪಾದಿಸುತ್ತಾರೆ. ಅಹಿಂಸೆಯನ್ನು ಪ್ರತಿಪಾದಿಸುವುದರೊಂದಿಗೆ ಪ್ರಕೃತಿ ಸಮತೋಲನ ಕಾಪಾಡಿಕೊಳ್ಳುವುದರ ಕಡೆಗೆ ನಮ್ಮ ಲಕ್ಷ್ಯ ಸೆಳೆಯುತ್ತಾರೆ. ಹಾವು ಒಕ್ಕಲಿಗನ ಮಿತ್ರನೆಂಬುದು ನಮಗೆ ಗೊತ್ತಿದೆ. ಬಿತ್ತಿದ ಬೀಜ, ಬೆಳೆದ ಸಸಿಗಳನ್ನು ಇಲಿ, ಹೆಗ್ಗಣಗಳಿಂದ ಈ ಹಾವುಗಳು ರಕ್ಷಿಸುತ್ತವೆ. ಆದ್ದರಿಂದ ಹಾವನ್ನು ಕೊಲ್ಲಬಾರದೆಂಬ ಒಳಭಾವ, ಬಸವಣ್ಣನವರಿಗಿರುವುದು ಇಲ್ಲಿ ಕಂಡುಬರುತ್ತದೆ.

ಮುಂದಿನ ಸಾಲಿನಲ್ಲಿ ಬರುವ ಈ ವಚನದ ಪ್ರಮುಖ ಪದವಾದ (key word) 'ಜಂಗಮ' ಶಬ್ದದ ಅರ್ಥವನ್ನು ನಾವು, ಜಂಗಮವೆಂದರೆ ಜ್ಞಾನಿ, ಸಮಾಜದ ಉನ್ನತಿಗಾಗಿ ತನ್ನನ್ನೇ ತಾನು ಸಮರ್ಪಿಸಿಕೊಂಡವ, ಧರ್ಮ ಪ್ರಸಾರಕ್ಕಾಗಿ ಸಂಚಾರದಲ್ಲಿರುವವನೆಂದು ತಿಳಿಯಬಹುದು. ಈ ಪದವನ್ನು ನಪುಂಸಕ ಲಿಂಗದ ಅರ್ಥದಲ್ಲಿ ತೆಗೆದುಕೊಂಡರೆ-ಸಮಾಜ, ಚಲನಶೀಲತೆವುಳ್ಳದ್ದು ಎಂದೂ ಅರ್ಥ ಆಗುತ್ತದೆ. ಇಂತಹ ಜಂಗಮ 'ಹಸಿದು' ಬಂದಾಗ ಮುಂದೆ ಹೋಗೆನ್ನದೆ ಅವನಿಗೆ ಊಟೋಪಚಾರಗಳಂತಹ ಆದರ ಸತ್ಕಾರ, ಸಹಾಯಗಳನ್ನು ನೀಡಬೇಕೆಂದು ಮೂರನೆಯ ಸಾಲಿನಲ್ಲಿ ಬಸವಣ್ಣ

* 'ಜಗಜ್ಯೋತಿ' ೨೫, ವಿಶ್ವೇಶ್ವರಯ್ಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರ್ಗಿ







ಒತ್ತಿಹೇಳುತ್ತಾರೆ. ಯಾವ ವ್ಯಕ್ತಿ ಸಕಲ ತ್ಯಾಗಗಳನ್ನು ಮಾಡಿ ಸಮಾಜಕ್ಕಾಗಿ ದುಡಿಯುವನೋ ಅವನು ಲಿಂಗಕ್ಕೆ (ದೇವರ) ಸಮಾನನಾದುದರಿಂದ ಆ ಜಂಗಮದ ಉಪಚಾರವೇ ದೇವರ ನೈವೇದ್ಯವೆಂದು ತಿಳಿಯಲು ಸೂಚಿಸುತ್ತಾರೆ. ಇಲ್ಲಿ ಜಂಗಮನ ಸಂಪೂರ್ಣ ಜವಾಬ್ದಾರಿಯನ್ನು ಸಮಾಜವೇ ಹೊರಬೇಕೆಂಬುದು ಬಸವಣ್ಣನವರ ಧೋರಣೆಯಾಗಿದೆ. ಬಸವಣ್ಣನವರ ಈ ಜಂಗಮವನ್ನು ಉಪೇಕ್ಷಿಸಿದವರು ಹಾಳಾಗಿ ಹೋಗುವವರೆಂದು, ಕೊನೆಯಲ್ಲಿ ಎಚ್ಚರಿಕೆಯನ್ನು ನೀಡುತ್ತಾರೆ.

ಇದು ಸರಿಯೂ ಇದೆ. ನಿಸ್ವಾರ್ಥಿ ಸಮಾಜ ಸೇವಕರಿಲ್ಲದೆ ಅಂದರೆ ಜಂಗಮರಿಲ್ಲದೆ ಯಾವ ಸಮಾಜವೂ ಪ್ರಗತಿಯನ್ನು ಸಾಧಿಸಲಾರದು. ಅದು ಬಹಳ ಕಾಲ ಬದುಕಲಾರದೂ ಕೂಡ ! ಆ ಸಮಾಜ ಸರ್ವರೀತಿಯ ಅಧೋಗತಿಗಳ ಆಗರವೂ ಆಗಿರುತ್ತದೆ. ಅಲ್ಲಿ ನೈತಿಕತೆಯಂತೂ ಪಾತಾಳವನ್ನೇ ಮುಟ್ಟಿರುತ್ತದೆ. ಹೀಗಾಗಿ ಆ ಸಮಾಜದಲ್ಲಿ ನೆಮ್ಮದಿ, ಸಾಮರಸ್ಯ, ಸಮೃದ್ಧಿಗಳಿರುವುದಿಲ್ಲ. ಆ ಸಮಾಜ ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಮತ್ತು ನೈತಿಕ ರಂಗಗಳಲ್ಲಿ ಪ್ರಗತಿಯನ್ನು ಸಾಧಿಸುವುದಿಲ್ಲ. ಈ ಜಂಗಮರು ಸಮಾತೋಮುಖಿ ಮಹಾನುಭಾವರು. ಅವರು ಸಮಾಜದಲ್ಲಿ ನೈತಿಕತೆಯನ್ನು ಬಿತ್ತುವರಲ್ಲದೆ, ಶೋಷಿತರಿಗೆ, ದುಃಖಿತರಿಗೆ, ದೀನರಿಗೆ, ದಲಿತರಿಗೆ, ಬಡವರಿಗೆ ಬಗ್ಗರಿಗೆ ಧ್ವನಿಯಾಗುತ್ತಾರೆ. ಆದುದರಿಂದ ಅಂತಹವರನ್ನು ಪೋಷಿಸುವ ಸಂರಕ್ಷಿಸುವ ಜವಾಬ್ದಾರಿ ಸಮಾಜದ್ದೇ ಆಗುತ್ತದೆ. ಇಂತಹ ಜಂಗಮ ತನಗಾಗಿಯಾಗಲಿ, ಸಮಾಜಕ್ಕಾಗಿಯಾಗಲಿ 'ಸಹಾಯ' ಬೇಡಲು ಬಂದಾಗ (ಉಂಬ ಜಂಗಮ ಬಂದರೆ') ಆದರಾತಿಥ್ಯಗಳನ್ನು ನೀಡದೆ, ಸಹಾಯ ಮಾಡದೆ, ಮುಂದೆ ಹೋಗೆಂದು ಹೇಳಿ, ಜಡದೇವರುಗಳಿಗೆ ('ಉಣ್ಣದ ಲಿಂಗಕ್ಕೆ') ಬೆಳ್ಳಿ, ಬಂಗಾರ, ವಜ್ರ ವೈಢೂರ್ಯ, ಧನ-ಕನಕಗಳನ್ನು ಅರ್ಪಿಸಿ ('ಬೋನ ಹಿಡಿವರಯ್ಯಾ') ಧನ್ಯರಾದೆವೆಂದು ತಿಳಿಯುತ್ತೇವೆ. ನಮ್ಮ ಅರಿವಿಗೆ ಬಾರದಂತೆ ಸಮಾಜದ ಬುಡಕ್ಕೆ ಹೊಡೆತ ಹಾಕುತ್ತೇವೆ. ಶೋಷಣೆಯ ಮತ್ತು ಅಂಧಾನುಕರಣೆಯ ಕೇಂದ್ರಗಳಾದ ಗುಡಿ, ಗುಂಡಾರ, ಪೂಜಾ ಸ್ಥಳಗಳನ್ನು ಪೋಷಿಸುತ್ತೇವೆ. ವೈಚಾರಿಕತೆಯ ನಡಾವಳಿಗಳಿಂದ ದೂರ ಸರಿಯುತ್ತೇವೆ.

ಮೇಲಿನ ಸಾಲುಗಳಲ್ಲಿ ಸಮಾಜದ ಅಪ್ರಯೋಜನ ಕಾರಿ ಮತ್ತು ಅಪಾಯಕಾರಿಯಾಗಬಲ್ಲ ರೀತಿ ನೀತಿಗಳಿಗೆ ಕನ್ನಡಿ ಹಿಡಿದ ಬಸವಣ್ಣನವರು, ಕೊನೆಯ ಸಾಲಿನಲ್ಲಿ ಸಮಾಜೋಪಕಾರಿಗಳನ್ನು, ಸಮಾಜ ಸುಧಾರಕರನ್ನು, ಮಹಾತ್ಮರನ್ನು, ಮಹಿಮರನ್ನು ('ಕೂಡಲಸಂಗನ ಶರಣರನ್ನು') ಉಪೇಕ್ಷಿಸಿದವರು ಹಾಳಾಗುವರೆಂದು ('ಕಲ್ಲುತಾಗಿದ ಮಿಟ್ಟೆಯಂತಿಪ್ಪರಯ್ಯಾ') ಹೇಳುತ್ತಾನೆ. ಎಚ್ಚರಿಕೆಯ ಗಂಟೆ ಬಾರಿಸುತ್ತಾರೆ.

ಶರಣರು ಮದವುಳ್ಳ ಆನೆಯೆಂಬ ಸಮಾಜಕ್ಕೆ ಅಂಕುಶದಂತಿರುವರು. ಅವರು ಸಮಾಜದ ಚಾರಿತ್ರ್ಯ ಮತ್ತು ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬರುವಲ್ಲಿ ಸಹಾಯ ಮಾಡುವವರು. ಸಮಾಜದಲ್ಲಿ ನೀತಿ ನಿಯಮಗಳನ್ನು ಬೆಳೆಸಿಕೊಂಡು ಬರುವವರು. ಶಾಂತಿ ಸುಭಿಕ್ಷೆಗಳು ನೆಲೆಸುವಂತೆ ಮಾಡುವವರೂ ಆಗಿರುತ್ತಾರೆ. ಅಂತಹವರನ್ನು ಉಪೇಕ್ಷಿಸಿದರೆ ನಾವೆಲ್ಲರೂ ಹಾಳಾಗುವುದು ಖಚಿತವೇ ಇದೆ ! (Sharnas are the Custodians of Moral Values of a society).

ಹೀಗೆ ಈ ವಚನವು ಸಮಾಜದಲ್ಲಿಯ ದ್ವಂದ್ವ ನೀತಿಗಳನ್ನು ಬಹಳ ಯಶಸ್ವಿಯಾಗಿ ಹೊರಹಾಕುತ್ತದೆ. ಕಲ್ಲುನಾಗರ ಕಂಡರೆ ಮೂಢ'ನಂಬಿಕೆಯಿಂದ ಹಾಲೆರೆಯುವದು, ಅದೇ ರೀತಿ ಜೀವಂತ ಹಾವನ್ನು ಕಂಡ ಕೂಡಲೇ ಅದನ್ನು ಕೊಲ್ಲಲು ಧಾವಿಸುವುದು ಸಮಾಜದ ಜನರಲ್ಲಿಯ ಭಯ ಮಿಶ್ರಿತ, ಒಂದು ದ್ವಂದ್ವನೀತಿಯನ್ನೂ, ಅದೇ ರೀತಿ ಹಸಿದು ಬಂದ ಜಂಗಮನಿಗೆ ಅನ್ನವನ್ನು ನೀಡದೆ ಮುಂದೆ ಹೋಗೆಂದು ಅಸಡ್ಡೆಯಿಂದ ನುಡಿದು ಉಣ್ಣದ ಜಡದೇವರುಗಳಿಗೆ ನೈವೇದ್ಯ ಹಿಡಿಯುವ ಅವರಲ್ಲಿಯ ಅಜ್ಞಾನಯುಕ್ತ ಇನ್ನೊಂದು ದ್ವಂದ್ವವನ್ನು ಪರಿಣಾಮಕಾರಿಯಾಗಿ ಬಿಚ್ಚಿಡುತ್ತದೆ.

ಮಹೋನ್ನತ ಆಶಯಗಳುಳ್ಳ ಈ ವಚನವನ್ನು ಸಾಧಾರಣವಾಗಿ, ಕಲ್ಲುನಾಗರಿಗೆ ಹಾಲನೆರೆಯುವುದನ್ನು ಖಂಡಿಸಲಾಗುವುದಕ್ಕೆ ಅಷ್ಟೇ ಸೀಮಿತಗೊಳಿಸಲಾಗುತ್ತಿದೆ. ಹೀಗೆ ಖಂಡಿಸಿ ಮಕ್ಕಳಿಗೆ ರೋಗಿಗಳಿಗೆ ಹಾಲು ಕುಡಿಸಿ ಸಂತೃಪ್ತಿ ಪಡೆಯಲಾಗುತ್ತಿದೆ. ಬಸವಣ್ಣನ ನಿಜವಾದ 'ಸಮಾಜಮುಖಿ' ಅಂದರೆ 'ಜಂಗಮಮುಖಿ' ಆಶಯದತ್ತ ನಮ್ಮ ಲಕ್ಷ್ಯ ಸರಳವಾಗಿ ಹೋಗುವುದಿಲ್ಲ. ನಾವು 'ಬಸವಮುಖಿ'ಗಳಾಗಬೇಕಾಗಿದೆ. ಅಷ್ಟೇ !







ಜಿಜ್ಞಾಸೆಯ ದೃಷ್ಟಿಯಿಂದ, ಇದೇ ಧಾಟಿಯಲ್ಲಿಯ ಅಂಬಿಗರ ಚೌಡಯ್ಯನ ಕೆಳಗಿನ ವಚನವೂ ನಮ್ಮ ಗಮನವನ್ನು ಸೆಳೆಯುತ್ತದೆ.

**ಸ್ವಲ್ಪ ಅಮೃತಾನ್ನವನೊಯ್ದು ಹುತ್ತವೆಂದು**
**ಬಿಲ್ವದ್ವಾರದಲ್ಲಿ ಹೊಯ್ವ ತೊತ್ತಿಂಗೆಲ್ಲಿಯದೋ ಶಿವಾಚಾರ !**
**ಅದೆಂತೆಂದಡೆ**
**ಕಲ್ಲುನಾಗರ ಕಂಡಡೆ ಹಾಲು ಹೊಯ್ಯೆಂಬಳು,**
**ಬದುಕಿದ ನಾಗರ ಕಂಡಡೆ ಕೊಲ್ಲು ಕೊಲ್ಲೆಂಬಳು,**
**ಉಂಬ ಜಂಗಮ ಬಂದಡೆ ಇಲ್ಲವೆಂದಟ್ಟುವಳು,**
**ಉಣ್ಣದ ಕಲ್ಲು ಪ್ರತಿಮೆಯ ಮುಂದಿಟ್ಟು ಉಣ್ಣೆಂಬಳು,**
**ಇಂತಹ ವೇಷದ ಡಂಬ ತೊತ್ತಿಂಗೆ,**
**ವಿಚಾರಿಸದೆ ಲಿಂಗವ ಕೊಡಲಾಗದೆಂದಾತನಂಬಿಗರಚೌಡಯ್ಯ**

ಅಂಬಿಗರ ಚೌಡಯ್ಯನು ಬಸವಣ್ಣನ ಧಾಟಿಯಲ್ಲಿಯೇ ಸಾಗಿದ್ದರೂ, ಬಸವಣ್ಣನು ತನ್ನ ವಚನವನ್ನು ಸಮಷ್ಟಿಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಬರೆದಂತೆ ಕಂಡರೆ, ಅಂಬಿಗರ ಚೌಡಯ್ಯ ಈ ಮೇಲಿನ ವಚನವನ್ನು ಯಾರೋ ಒಬ್ಬ ಹೆಣ್ಣು ಮಗಳನ್ನು ತನ್ನ ದೃಷ್ಟಿಯಲ್ಲಿಟ್ಟು ಬರೆದಂತೆ ಮೇಲ್ನೋಟಕ್ಕೆ ಕಾಣಿಸುತ್ತದೆ. ಆದರೂ ಎರಡೂ ವಚನಗಳು ಡಂಬಾಚಾರವನ್ನು, ಅನಾಚರಣೆಯನ್ನು ಅಷ್ಟೇ ಪರಿಣಾಮಕಾರಿಯಾಗಿ ಖಂಡಿಸುತ್ತವೆ. ಅದರಲ್ಲೂ ಅಂಬಿಗರ ಚೌಡಯ್ಯ ಇನ್ನೂ ಮುಂದೆ ಹೋಗಿ, ಕಂದಾಚಾರಿಗಳಿಗೆ, ಡಂಬಾಚಾರಿಗಳಿಗೆ ಲಿಂಗದೀಕ್ಷೆ ನೀಡಬಾರದೆಂದು ಸ್ಪಷ್ಟವಾಗಿ ಹೇಳುತ್ತಾನೆ. ಲಿಂಗವಂತರು ಇಂತಹ ಆಚರಣೆಗಳಿಗೆ ಒಳಗಾಗಬಾರದೆಂದು ಸೂಚಿಸುತ್ತಾನೆ. ಲಿಂಗ ಕಟ್ಟಿಕೊಂಡವರು ಮೂಢನಂಬಿಕೆ ಮತ್ತು ಮೂಢ ಆಚರಣೆಗಳಿಗೆ ಒಳಗಾಗದೇ ವೈಚಾರಿಕತೆಯನ್ನು ಬೆಳೆಸಿಕೊಳ್ಳಬೇಕೆಂದು ಹೇಳುತ್ತಾನೆ.

ಆಧಾರಗಳು :
೧. ಬಸವಣ್ಣನವರ ವಚನ ಸಂಪುಟ : ಸಮಗ್ರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು.
೨. ಸಂಕೀರ್ಣ ವಚನ ಸಂಪುಟ : ಅಂಬಿಗರ ಚೌಡಯ್ಯನ ವಚನಗಳು.







ಕ್ಷೇತ್ರ ವಾರ್ತೆ

# ಡಾ. ಎಸ್. ಶಿವರಾಜಪ್ಪ ಅವರ 'ನಡೆದಾಡಿದ ದೇವರು' ಕೃತಿ ಲೋಕಾರ್ಪಣೆ



ಹಿರಿಯ ವಿದ್ವಾಂಸರು, ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ವಿದ್ಯಾ ಸಂಶೋಧನಾಲಯದ ವಿಶ್ರಾಂತ ನಿರ್ದೇಶಕರಾದ ಡಾ. ಎಸ್. ಶಿವರಾಜಪ್ಪನವರ ವಿರಚಿತ 'ನಡೆದಾಡಿದ ದೇವರು' ಹಾಗೂ 'ಮಾದೇಶ್ವರರ ಸಾಹಿತ್ಯಿಕ ನೆಲೆಗಳ ಹುಡುಕಾಟ' ಕೃತಿಗಳನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸೆಪ್ಟೆಂಬರ್ ೪ ರಂದು ಶ್ರೀಮಠದಲ್ಲಿ ನಡೆದ ಸರಳ ಸಮಾರಂಭದಲ್ಲಿ ಲೋಕಾರ್ಪಣೆ ಮಾಡಿದರು.

ಪೂಜ್ಯ ಶ್ರೀಗಳವರು ತಮ್ಮ ಶಿವನುಡಿಗಳಲ್ಲಿ "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತ್ಯಾಗದ ಪ್ರತಿರೂಪವಾಗಿದ್ದರು. ಜೀವನದುದ್ದಕ್ಕೂ ಲಕ್ಷಾಂತರ ಬಡ ವಿದ್ಯಾರ್ಥಿಗಳ ಭವಿಷ್ಯದ ಆಶಾಕಿರಣವಾಗಿದ್ದರು. ನೂರಹನ್ನೊಂದು ವರ್ಷಗಳ ಸಾರ್ಥಕ ಜೀವನ ನಡೆಸಿದರು. ಸರ್ವರನ್ನು ಸಮಭಾವದಿಂದ ಕಂಡ ಮಹಾಮಾನವತವಾದಿಗಳು. ಇಂತಹ ಪೂಜ್ಯರನ್ನು ಕುರಿತು ಡಾ. ಎಸ್. ಶಿವರಾಜಪ್ಪನವರು 'ನಡೆದಾಡಿದ ದೇವರು' ಮೌಲಿಕ ಕೃತಿಯನ್ನು ರಚಿಸುವುದರ ಮೂಲಕ ತಮ್ಮ ಭಕ್ತಿನಮನವನ್ನು ಸಲ್ಲಿಸಿ ಧನ್ಯತೆಯನ್ನು ಪಡೆದಿದ್ದಾರೆ" ಎಂದು ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ತುಮಕೂರು ವಿಶ್ವವಿದ್ಯಾಲಯದ ಕುಲಪತಿ ಪ್ರೊ. ವೈ.ಎಸ್. ಸಿದ್ಧೇಗೌಡ ಅವರು ಮಾತನಾಡಿ "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಞಾನ ಅನ್ನ ದಾಸೋಹದ ಮೂಲಕ ಶ್ರೀಕ್ಷೇತ್ರವನ್ನು ವಿಶ್ವಮಟ್ಟಕ್ಕೇರಿಸಿದ ಮಹಾನ್ ಸಂತರು. ಅವರು ತಮ್ಮ ಅನನ್ಯ ಸೇವೆಯ ಮೂಲಕ ಎಲ್ಲರ ಮನೆ ಮನಗಳಲ್ಲಿ ಆಧ್ಯಾತ್ಮ ಜ್ಯೋತಿಯಾಗಿದ್ದಾರೆ. ಭಕ್ತರಿಗೆ ಅವರು ಸದಾ ನಡೆದಾಡುವ ದೇವರಾಗಿದ್ದಾರೆ" ಎಂದು ಹೇಳಿದರು.

ಪ್ರಾಸ್ತಾವಿಕ ನುಡಿಗಳನ್ನಾಡಿದ ಗ್ರಂಥಕರ್ತೃ ಡಾ. ಎಸ್. ಶಿವರಾಜಪ್ಪನವರು "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಸವೇಶ್ವರರ ಪ್ರತಿರೂಪ. ಇವರ ಕಾಲಾವಧಿಯಲ್ಲಿ ನಡೆದ ಜ್ಞಾನಾನ್ನದಾಸೋಹ ಜಗತ್ತಿನ ಯಾವ ಮಠ ಮಂದಿರಗಳಲ್ಲಿಯೂ ನಡೆದಿಲ್ಲ. ಇದು ಗಿನ್ನೀಸ್ ದಾಖಲೆಯಾಗುವಂತಹದು. ಇಂದು ಲಕ್ಷಾಂತರ ಮನೆಗಳಲ್ಲಿ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಚ್ಚಿದ ಜ್ಞಾನಜ್ಯೋತಿ ಬೆಳಗುತ್ತಿದೆ. ಅವರ ಕರಕಮಲ ಸಂಜಾತರಾದ ಪರಮಪೂಜ್ಯ







ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ಮಠದ ಸೇವಾಕಾರ್ಯಗಳನ್ನು ಮುಂದುವರಿ ಸುತ್ತಿರುವುದು ಭಕ್ತರಿಗೆ ಸಂತೋಷವನ್ನುಂಟು ಮಾಡಿದೆ" ಎಂದು ಹೇಳಿದರು.

ವಿಶೇಷ ಆಹ್ವಾನಿತರಾಗಿ ಆಗಮಿಸಿದ್ದ ಜಾನಪದ ವಿದ್ವಾಂಸರು, ಸಿದ್ಧಗಂಗಾ ಮಾಸಪತ್ರಿಕೆಯ ಪ್ರಧಾನ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಪೂಜ್ಯರ ಸಾಧನೆಗಳನ್ನು ಪರಿಚಯ ಮಾಡಿಕೊಟ್ಟರು. ಹಿರಿಯ ಸಾಹಿತಿಗಳು, ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರೂ ಆದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ತುಮಕೂರು ವಿಶ್ವವಿದ್ಯಾಲಯದ ಕುಲಸಚಿವರಾದ ಪ್ರೊ. ಕೆ. ಶಿವಚಿತ್ತಪ್ಪನವರು ಉಪಸ್ಥಿತರಿದ್ದರು. ಶ್ರೀಮಠದ ವತಿಯಿಂದ ಡಾ. ಎಸ್. ಶಿವರಾಜಪ್ಪನವರನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸನ್ಮಾನಿಸಿ ಆಶೀರ್ವದಿಸಿದರು. ಶ್ರೀಮಠದ ಸಾರ್ವಜನಿಕ ಸಂಪರ್ಕಾಧಿಕಾರಿ ಶ್ರೀ ಡಿ.ಎಸ್. ನಾಗರಾಜ ಅವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಶ್ರೀಮಠದ ವಿದ್ಯಾರ್ಥಿಗಳ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ವೇದಿಕೆಯಲ್ಲಿ ಮೈಸೂರು ತಾರಾ ಪ್ರಿಂಟ್ಸ್ ಮಾಲೀಕರಾದ ಶ್ರೀ ಎಂ.ಎನ್. ಶಶಿಕುಮಾರ್ ಅವರು ಉಪಸ್ಥಿತರಿದ್ದರು.

## ಅಭಿನಂದನೆ



ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಲಿಂಗೈಕ್ಯ ದಿನವನ್ನುದಾಸೋಹ ದಿನವನ್ನಾಗಿ ಅಧಿಕೃತ ಆದೇಶ ಹೊರಡಿಸಿರುವುದಕ್ಕೆ ಶ್ರೀಗಳ ಜೀವನಚರಿತ್ರೆ ಒಳಗೊಂಡ "ಚಿತ್ರ ಜಂಗಮ" ಚಿತ್ರ ಸಂಪುಟವನ್ನು ಕಲಬುರಗಿಯ ಅತಿಥಿ ಗೃಹದಲ್ಲಿ ಮುಖ್ಯಮಂತ್ರಿಗಳಿಗೆ ನೀಡಿ ಅಭಿನಂದಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಮುರುಗೇಶ ನಿರಾಣಿ, ಸೇಡಂ ಶಾಸಕ ಹಾಗೂ ಕಲ್ಯಾಣ ಕರ್ನಾಟಕ ಸಾರಿಗೆ ಸಂಸ್ಥೆಯ ಅಧ್ಯಕ್ಷ ಶ್ರೀ ರಾಜಕುಮಾರ ಪಾಟೀಲ ಸೇಡಂ, ಮಾಜಿ ಶಾಸಕ ಶ್ರೀ ದೊಡ್ಡಪ್ಪ ಗೌಡ ಪಾಟೀಲ ನರಿಬೋಳ ಹಾಗೂ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ಜಿಲ್ಲಾ ಘಟಕದ ಕಾರ್ಯದರ್ಶಿ ಶ್ರೀ ದೇವೇಂದ್ರಪ್ಪ ಅವಂಟಿ ಅವರು ಉಪಸ್ಥಿತರಿದ್ದರು.

ಕ್ಷೇತ್ರ ವಾರ್ತೆ

# ಶ್ರೀಮಠದಲ್ಲಿ ಶಿಕ್ಷಕರ ದಿನಾಚರಣೆ




ಸೆಪ್ಟೆಂಬರ್ ೫ ರಂದು ಶ್ರೀಮಠದ ಸಂಯುಕ್ತ ವಿದ್ಯಾರ್ಥಿ ಸಂಘ ಹಾಗೂ ಸನಿವಾಸ ವಿದ್ಯಾ ಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶಿಕ್ಷಕರ ದಿನಾಚರಣೆಯನ್ನು ಆಚರಿಸಲಾಯಿತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ ಶಿಕ್ಷಣ ತಜ್ಞ, ದಕ್ಷ ಆಡಳಿತಾಧಿಕಾರಿ, ಮಾಜಿ ರಾಷ್ಟ್ರಪತಿ ಡಾ. ಎಸ್. ರಾಧಾಕೃಷ್ಣನ ಅವರ ವ್ಯಕ್ತಿತ್ವ ಹಾಗೂ ಸಾಧನೆಗಳನ್ನು ವಿವರಿಸಿ ಶಿಕ್ಷಕರು ಡಾ. ರಾಧಾಕೃಷ್ಣರ ಅವರ ಶಿಸ್ತು, ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸಬೇಕು ಎಂದು ಕರೆ ನೀಡಿದರು.

ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಸುಮಾರು ೫೦ ಜನ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯವರನ್ನು ಸನ್ಮಾನಿಸಿದ ವಿಧಾನ ಪರಿಷತ್ ಸದಸ್ಯರಾದ ಡಾ. ವೈ.ವಿ. ನಾರಾಯಣಸ್ವಾಮಿಯವರು ಮಾತನಾಡಿ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ವಿವರಿಸಿ, ಹಿಂದಿಗಿಂತಲೂ ಇಂದು ಶಿಕ್ಷಕರ ಜವಾಬ್ದಾರಿ ಗುರುತರವಾಗಿದೆ. ಈ ನಿಟ್ಟಿನಲ್ಲಿ ಶಿಕ್ಷಕರು ತಮ್ಮನ್ನು ತೊಡಗಿಸಿಕೊಳ್ಳಬೇಕೆಂದು ಹೇಳಿದರು.




ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ವಿಧಾನ ಪರಿಷತ್ ಸದಸ್ಯರಾದ ಶ್ರೀ ಚಿದಾನಂದ ಎಂ. ಗೌಡರವರು ಮಾತನಾಡಿ "ನಾನು ಪದವೀಧರ ಕ್ಷೇತ್ರದಿಂದ ವಿಧಾನ ಪರಿಷತ್ ಸದಸ್ಯರಾಗಿ ಆಯ್ಕೆಯಾಗಲು ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಹಾಗೂ ಮಠದ ಕೊಡುಗೆ ಅಪಾರವಾಗಿದೆ. ನಾನು ಶ್ರೀಮಠಕ್ಕೆ ಚಿರಋಣಿಯಾಗಿದ್ದೇನೆ. ಶ್ರೀಮಠದ ಸೇವೆಯನ್ನು ಪ್ರಾಮಾಣಿಕವಾಗಿ ಮಾಡುತ್ತೇನೆ" ಎಂದು ಹೇಳಿದರು.

ಸನ್ಮಾನಿತರ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸಿದ ನಿವೇದಿತಾ ಪ್ರೌಢಶಾಲೆಯ ನಿವೃತ್ತ ಮುಖ್ಯ ಶಿಕ್ಷಕರಾದ ಶ್ರೀ ಎಸ್. ಮಹದೇವಯ್ಯ ಅವರು ಪರಮಪೂಜ್ಯರ ಆಶೀರ್ವಾದ ಹಾಗೂ ಶ್ರೀಮಠದೊಂದಗಿನ ಅವಿನಾಭಾವ ಸಂಬಂಧವನ್ನು ವಿವರವಾಗಿ ತಿಳಿಸಿಕೊಟ್ಟರು.

ಕಾರ್ಯಕ್ರಮ ವಿದ್ವಾನ್ ಎಲ್. ಶಿವಕುಮಾರ ಅವರ ನೇತೃತ್ವದಲ್ಲಿ ಶ್ರೀಮಠದ ವಿದ್ಯಾರ್ಥಿಗಳಿಂದ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಸಂಸ್ಕೃತ ಕಾಲೇಜಿನ ವೇದ ವಿದ್ಯಾರ್ಥಿಗಳಿಂದ ವೇದಘೋಷ ನಡೆಯಿತು. ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ಪ್ರಾಚಾರ್ಯರಾದ ಡಾ. ಎಸ್.ಎಸ್. ನಿರಂಜನಮೂರ್ತಿ ಸ್ವಾಗತಿಸಿದರು. ಡಾ. ಸಿ ಅಶ್ವತ್ಥಪ್ಪ ನಿವೃತ್ತ ನೌಕರರ ಪಟ್ಟಿಯನ್ನು ವಾಚಿಸಿದರು. ವಿದ್ವಾನ್ ಎನ್.ಹೆಚ್. ಗುರುಪ್ರಸಾದ ಶರಣು ಸಮರ್ಪಣೆ ಮಾಡಿದರು. ಡಾ. ಹೆಚ್.ಎನ್. ಪ್ರಶಾಂತ್ ಕಾರ್ಯಕ್ರಮವನ್ನು ನಿರೂಪಿಸಿದರು.



ಕ್ಷೇತ್ರ ವಾರ್ತೆ

# ಶ್ರೀಮಠದಲ್ಲಿ ಗಣೇಶೋತ್ಸವ



ದಿನಾಂಕ ೧೦-೦೯-೨೦೨೧ನೇ ಶುಕ್ರವಾರ ಬೆಳಗ್ಗೆ ೯.೦೦ ಗಂಟೆಗೆ ಶ್ರೀ ಸಿದ್ಧಗಂಗಾ ಮಠದ ಪ್ರಾರ್ಥನಾ ಸಭಾಂಗಣದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘ, ಸನಿವಾಸ ವಿದ್ಯಾಸಂಸ್ಥೆಗಳ ವತಿಯಿಂದ ಕೋವಿಡ್ ನಿಯಮಗಳಡಿಯಲ್ಲಿ ಶ್ರೀ ವಿದ್ಯಾಗಣಪತಿಯ ಪ್ರತಿಷ್ಠಾಪನೆ ಹಾಗೂ ಪೂಜಾ ಕಾರ್ಯಕ್ರಮಗಳು ವಿಧಿವತ್ತಾಗಿ ನೆರವೇರಿದವು. ಇದೇ ದಿನ ಸಂಜೆ ೬.೦೦ ಗಂಟೆಗೆ ವಿದ್ಯಾಗಣಪತಿಯ ವಿಸರ್ಜನಾ ಮಹೋತ್ಸವವನ್ನು ಹಮ್ಮಿಕೊಳ್ಳಲಾಗಿತ್ತು. ಇದರ ಅಂಗವಾಗಿ ಉಪನ್ಯಾಸಮಾಲೆಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಏರ್ಪಡಿಸಲಾಗಿತ್ತು. ಪೂಜ್ಯ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ಗಣೇಶನ ಹಬ್ಬದ ಮೂಲ ಆಶಯ ಹಾಗೂ ಮಹತ್ವವನ್ನು ತಿಳಿಸಿದರು. ಉಪನ್ಯಾಸಕರಾಗಿ ಅಗಮಿಸಿದ್ದಂತಹ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಕೋ.ರಂ.ಬಸವರಾಜುರವರು ಶ್ರೀ ಮಠದ ಮಕ್ಕಳು ಹಾಗೂ ಸದ್ಭಕ್ತರನ್ನು ಉದ್ದೇಶಿಸಿ ಗಣೇಶ ಮಹಿಮೆಯನ್ನುಳ್ಳ ಶಮಂತಕೋಪಖ್ಯಾನ ಎಂಬ ಕಥಾಶ್ರವಣವನ್ನು ಮಾಡಿದರು. ಆವರು ಈ ಸಂದರ್ಭದಲ್ಲಿ ಮಾತನಾಡುತ್ತಾ ಭಯವಿದ್ದೊಡೆ ಭಕ್ತಿ, ಭಕ್ತಿವಿದ್ದೊಡೆ ಮುಕ್ತಿ. ಆ ಮುಕ್ತಿ ಮನುಷ್ಯನಿಗೆ ದೊರೆಯಬೇಕೆಂದರೆ ಈ ತರಹದ ಕಥಾಶ್ರವಣವನ್ನು ಮಾಡಬೇಕು ಎಂದು ಕರೆಕೊಟ್ಟರು.



ಶ್ರೀ ಮಠದ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆಯಿಂದ ಈ ಕಾರ್ಯಕ್ರಮವು ಆರಂಭವಾಯಿತು. ಶ್ರೀ ಜೆ.ಆರ್. ಸಿದ್ಧಲಿಂಗ ಸ್ವಾಮಿಯವರು ಸ್ವಾಗತವನ್ನು ಕೋರಿದರು. ಡಾ॥ ಹನುಮಂತಯ್ಯರವರು ಶರಣು ಸಮರ್ಪಣೆ ಮಾಡಿದರು. ಡಾ॥ ಸಿ. ಅಶ್ವತ್ಥಪ್ಪರವರು ಕಾರ್ಯಕ್ರಮವನ್ನು ನಿರೂಪಿಸಿದರು.

ಅನಂತರ ಗಣಪತಿ ವಿಸರ್ಜನಾ ಕಾರ್ಯವು ವಿದ್ವಾನ್ ಎನ್.ಹೆಚ್. ಗುರುಪ್ರಸಾದ್ ಹಾಗೂ ಶ್ರೀ ನವೀನ್‌ಕುಮಾರ್ ಹೆಚ್.ಆರ್ ಇವರ ನೇತೃತ್ತ್ವದಲ್ಲಿ ನೆರವೇರಿತು. ಈ ಕಾರ್ಯಕ್ರಮದಲ್ಲಿ ಕಾಲೇಜಿನ ಬೋಧಕ -ಬೋಧಕೇತರ ಸಿಬ್ಬಂದಿ ವರ್ಗದವರು ಹಾಜರಿದ್ದರು.

## ಜಿಲ್ಲಾ ವಾರ್ತೆ

# ಕಲಬುರ್ಗಿಯಲ್ಲಿ ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದಿಂದ ವಿಜಯೋತ್ಸವ



ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಲಿಂಗೈಕ್ಯ ದಿನವನ್ನು 'ದಾಸೋಹ ದಿನ'ವನ್ನಾಗಿ ಆಚರಣೆ ಮಾಡುವಂತೆ ಸರ್ಕಾರ ಆದೇಶ ಹೊರಡಿಸಿದ ಹಿನ್ನೆಲೆಯಲ್ಲಿ ಕಲಬುರಗಿಯ ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿ ಸಂಘದ ವತಿಯಿಂದ ಸೆಪ್ಟೆಂಬರ್ ೪ ರಂದು ಸಂಭ್ರಮದಿಂದ ಪ್ರಸಾದ ವಿತರಿಸುವುದರ ಮೂಲಕ ವಿಜಯೋತ್ಸವವನ್ನು ಪೂಜ್ಯ ಶ್ರೀ ಜಗದ್ಗುರು ಸಾರಂಗಧರ ದೇಶಿಕೇಂದ್ರ ಸ್ವಾಮೀಜಿಯವರ ದಿವ್ಯಸಾನ್ನಿಧ್ಯದಲ್ಲಿ ಆಚರಿಸಲಾಯಿತು.

ಪೂಜ್ಯರು ಈ ಸಂದರ್ಭದಲ್ಲಿ ಮಾತನಾಡಿ 'ದಾಸೋಹ ದಿನ'ವನ್ನು ಕರ್ನಾಟಕ ಮಾತ್ರವಲ್ಲದೇ ಇಡೀ ದೇಶವೇ ಆಚರಿಸುವಂತಾಗಬೇಕು, ತ್ರಿವಿಧ ದಾಸೋಹಿ, ಕರ್ನಾಟಕ ರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲಿಂಗೈಕ್ಯರಾದ ಜನವರಿ ೨೧ ರಂದು ದಾಸೋಹ ದಿನವೆಂದು ಆಚರಣೆ ಮಾಡಬೇಕು ಎಂದು ಸರ್ಕಾರ ಆದೇಶ ಹೊರಡಿಸಿರುವುದು ಶ್ರೀಮಠದ ಹಳೆಯ ವಿದ್ಯಾರ್ಥಿಗಳಿಗಷ್ಟೇ ಅಲ್ಲ; ಶ್ರೀಮಠದ ಅಭಿಮಾನಿಗಳಿಗೂ ಸಂತಸ ತರುವ ವಿಷಯವಾಗಿದೆ. ಶ್ರೀಮಠದಲ್ಲಿ ಪ್ರತಿನಿತ್ಯ ೧೦ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಊಟ, ವಸತಿ ಮತ್ತು ಶಿಕ್ಷಣ ನೀಡುತ್ತಿರುವ ಏಕೈಕ ಮಠ ಎಂದರೆ ಅದು ಸಿದ್ಧಗಂಗಾ ಮಠವಾಗಿದೆ. ಶ್ರೀಗಳವರು ತಮ್ಮ ಜೀವಿತಾವಧಿವರೆಗೂ ದಾಸೋಹಕ್ಕೆ ಹೆಚ್ಚಿನ ಒತ್ತು ನೀಡಿದ್ದರಿಂದ ಸರ್ಕಾರ ಈ ನಿರ್ಧಾರ ಕೈಗೊಂಡಂತಾಗಿದೆ" ಎಂದು ಹೇಳಿದರು.

ಸಮಾರಂಭದಲ್ಲಿ ಜಿಲ್ಲಾ ವೀರಶೈವ ಸಮಾಜದ ಅಧ್ಯಕ್ಷರೂ, ಶ್ರೀ ಸಿದ್ಧಗಂಗಾ ಹಳೇ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ಜಿಲ್ಲಾ ಘಟಕದ ಅಧ್ಯಕ್ಷರಾದ ಶ್ರೀ ಅರುಣಕುಮಾರ ಪಾಟೀಲ್ ಕೂಡಲಹಂಗರಗಾ, ಶ್ರೀಶೈಲ ಘೂಳಿ, ಶ್ರೀ ಜಯದೇವಪ್ಪ ಹಲಕಟಿ, ಶ್ರೀ ಮಲ್ಲಿಕಾರ್ಜುನ ಎಸ್. ಸಾರವಾಡ, ಶ್ರೀ ರುದ್ರಮುನಿ ಪುರಾಣಿ, ಶ್ರೀ ಜಗದೀಶ ಪಟ್ಟಣ, ಶ್ರೀ ಹೊಳಕುಂದಾ, ಶ್ರೀ ಶಿವಕುಮಾರ ಶೇಖಜಿ, ಶ್ರೀ ಶಿವಕುಮಾರ ಮಾಲಾದಣ್ಣೂರ, ಶ್ರೀ ಈಶ್ವರ ಪನಶೆಟ್ಟಿ, ಶ್ರೀ ಅಶೋಕ ಉಪಸ್ಥಿತರಿದ್ದರು. ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ಜಿಲ್ಲಾ ಘಟಕದ ಕಾರ್ಯದರ್ಶಿ ಶ್ರೀ ದೇವೇಂದ್ರಪ್ಪ ಅವಂಟಿ ಶ್ರೀ ಲಕ್ಷ್ಮೀಕಾಂತ ಸ್ವಾದಿ ಮೊದಲಾದವರು ಅವರು ಸ್ವಾಗತಿಸಿದರು. ಕಾರ್ಯಕ್ರಮದ ನಂತರ ಪ್ರಸಾದ ವಿತರಣೆ ಮಾಡಲಾಯಿತು.

"Siddaganga" Monthly - Postal Reg. No. L2/RNP/385/TMR/2021-23
Posted at RMS, Tumkur-572 102

RNI No. 17139/69



To

_______________________

_______________________

_______________________

_______________________

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru 10. Ph : 23494232

email ID : geetanjaligraphics@gmail.com